ಕಾಯಕವೇ ಕೈಲಾಸ



# ಸಿದ್ಧಗಂಗಾ



ಸಂಪುಟ : ೫೪ ಜುಲೈ ೨೦೧೮ ಸಂಚಿಕೆ : ೦೭



ನೂತನ ಉಪ ಮುಖ್ಯಮಂತ್ರಿ ಡಾ. ಜಿ. ಪರಮೇಶ್ವರ ಅವರು ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀ ಶ್ರೀಗಳವರ ದರ್ಶನಾಶೀರ್ವಾದ ಪಡೆದರು. ಈ ಸಂದರ್ಭದಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಉಪಸ್ಥಿತರಿದ್ದರು.



ವಿಶ್ವಯೋಗ ದಿನಾಚರಣೆಯ ಅಂಗವಾಗಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಶ್ರೀಮಠದ ವಿದ್ಯಾರ್ಥಿಗಳು ಯೋಗ ಪ್ರದರ್ಶನ ನೀಡಿದರು. ಪೂಜ್ಯ ಶ್ರೀ ಶ್ರೀಗಳವರು ಯೋಗದ ಮಹತ್ವವನ್ನು ಕುರಿತು ತಿಳಿಸಿದರು.



ಪರಮಪೂಜ್ಯ
ಡಾ. ಶ್ರೀ ಶ್ರೀ ಮಹಾಂತ ಶಿವಯೋಗಿಗಳು
(೧-೮-೧೯೩೨ - ೧೯-೦೫-೨೦೧೮)




## ಅಂತರಂಗ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥
ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ



# ಸಿದ್ಧಗಂಗಾ

ಸಂಪುಟ : ೫೪ ಜುಲೈ ೨೦೧೮ ಸಂಚಿಕೆ : ೦೭

## ಒಳಪುಟಗಳಲ್ಲಿ ....................



ಚಂದಾ ವಿವರ : ವಾರ್ಷಿಕ ಚಂದಾ ರೂ. 200/–
ಆಜೀವ ಸದಸ್ಯತ್ವ ರೂ. 1500/– ಬಿಡಿ ಪ್ರತಿ ರೂ. 20.00



ಪ್ರಕಾಶನ :
ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪.

ಮುದ್ರಕರು :
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಆಫ್‌ಸೆಟ್
ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ,
ತುಮಕೂರು-೫೭೨ ೧೦೪.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪
ದೂ: ೦೮೧೬-೨೨೮೨೩೨೨.





## ಸಂಪಾದಕೀಯ........

# ಶ್ರೀಮಠದ ಸೇವಾಸಂಪಿಗೆ

ಶ್ರೀಮಠದ ಸೇವಾಸಂಪಿಗೆ ಶ್ರೀ ಸಿ.ಎಸ್. ಸಿದ್ಧಲಿಂಗಯ್ಯನವರು ಇನ್ನಿಲ್ಲವಾದರು. ದಿನಾಂಕ ೨-೬-೨೦೧೮ ರಂದು ಲಿಂಗದೊಳಗಾದರು. ಶ್ರೀಮಠದಲ್ಲಿ ಪದವಿ ಪೂರ್ವಕಾಲೇಜಿನ ಪ್ರಿನ್ಸಿಪಾಲರಾಗಿ, ಸಿದ್ಧಗಂಗಾ ಶಿಕ್ಷಣ ಸಂಸ್ಥೆಯ ಶಿಕ್ಷಣಾಧಿಕಾರಿಗಳಾಗಿ ಸೇವೆ ಸಲ್ಲಿಸಿದ್ದ ಶ್ರೀಯುತರು ತಮ್ಮ ೮೫ನೇ ವಯಸ್ಸಿನಲ್ಲಿ ಕುಟುಂಬ ವರ್ಗದವರನ್ನು, ಅಭಿಮಾನಿಗಳನ್ನು ಅಗಲಿದ್ದಾರೆ. ೧೦-೦೮-೧೯೩೩ರಲ್ಲಿ ಜನಿಸಿದ್ದರು. ೨-೬-೨೦೧೮ರಲ್ಲಿ ದೂರವಾದರು.

ಪತ್ನಿ ಶ್ರೀಮತಿ ಜಯಮ್ಮ, ಇಬ್ಬರು ಪುತ್ರಿಯರು ಹಾಗೂ ಓರ್ವ ಪುತ್ರನನ್ನು ಅಗಲಿದ್ದಾರೆ. ತುಮಕೂರಿನ ಅಶೋಕನಗರದ ನಿವಾಸಿಗಳಾಗಿದ್ದ ಶ್ರೀ ಸಿಎಸ್‌ಎಸ್ ರವರು ಬಿ.ಹೆಚ್. ರಸ್ತೆಯಲ್ಲಿ ನಡೆದು ಹೋಗುತ್ತಿದ್ದಾಗ ದ್ವಿಚಕ್ರ ವಾಹನ ಹಿಂಬದಿಯಿಂದ ಬಂದು ಗುದ್ದಿದ ಪರಿಣಾಮ ತೀವ್ರವಾಗಿ ಗಾಯಗೊಂಡು, ತಕ್ಷಣವೇ ತುಮಕೂರಿನ ಸುಪ್ರಸಿದ್ಧ ಆಸ್ಪತ್ರೆಯಾದ ಸಿದ್ಧಗಂಗಾ ಆಸ್ಪತ್ರೆಗೆ ದಾಖಲಾಗಿ ಚಿಕಿತ್ಸೆ ಫಲಕಾರಿಯಾಗದೆ ಕೊನೆಯುಸಿರು ಎಳೆದರು.

೧೯೩೩ರಲ್ಲಿ ಸಿದ್ಧಗಂಗಾ ಶಿಕ್ಷಣ ಸಂಸ್ಥೆಯನ್ನು ಸೇರಿದ್ದ ಶ್ರೀಯುತರು ಸಿದ್ಧಗಂಗಾ ಜೂನಿಯರ್ ಕಾಲೇಜಿನ ಪ್ರಿನ್ಸಿಪಾಲರಾಗಿ ೧೯೯೧ರಲ್ಲಿ ನಿವೃತ್ತರಾದರು. ಅಂದಿನಿಂದ ಶ್ರೀಮಠದ ಶಿಕ್ಷಣಾಧಿಕಾರಿಗಳಾಗಿ ಸೇವೆ ಸಲ್ಲಿಸುತ್ತಿದ್ದರು. ಭಾನುವಾರ ಅವರ ಜನ್ಮಸ್ಥಳವಾದ ದಾಬಸ್‌ಪೇಟೆಯ ತಿಮ್ಮನಾಯಕನಹಳ್ಳಿಯಲ್ಲಿ ಅಂತ್ಯಕ್ರಿಯೆ ನಡೆಯಿತು.

ಮೃದುವಚನ, ಸದುವಿನಯ, ಸದಾನಗುಮುಖದ ಶ್ರೀ ಸಿದ್ಧಲಿಂಗಯ್ಯನವರ ಆತ್ಮಕ್ಕೆ ದಯಾಮಯನಾದ ಪರಶಿವನು ಚಿರಶಾಂತಿಯನ್ನು ಹಾಗೂ ಅವರ ಕುಟುಂಬ ವರ್ಗದವರಿಗೆ ಅವರ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ಶ್ರೀ ಸಿದ್ಧಗಂಗಾ ಗುರುಪರಂಪರೆ ಅನುಗ್ರಹಿಸಲಿ ಎಂದು 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ.

ಪ್ರೊ. ಹೆಚ್.ವಿ. ವೀರಭದ್ರಯ್ಯ
ಸಂಪಾದಕರು







## ಶ್ರೀವಾಣಿ

# ಮಾನವೀಯತೆಯ ಮಂಗಳದೀಪ

ಶ್ರೀ ಮೋಕ್ಷಗುಂಡಂ ಶ್ರೀ ವಿಶ್ವೇಶ್ವರಯ್ಯನವರು ತಮ್ಮ ಜೀವಿತ ಕಾಲದಲ್ಲಿಯೇ ದಂತಕಥೆಯಾಗಿ ಬೆಳೆದವರು. ಗ್ರಾಮೀಣ ಬಂಧುಗಳ ಜೊತೆಯಲ್ಲಿ ಬೆಳೆದು ಅವರ ಚಿತ್ಕೋಶದಲ್ಲಿ ಚಿರಸ್ಥಾಯಿಯಾಗಿ ನಿಂತವರು. ಬೌದ್ಧಿಕ ಸಿದ್ಧಿಗೆ ಸಂಕೇತ ಸ್ತಂಭವೆನಿಸಿದವರು. ಇಂಜಿನಿಯರಿಂಗ್ ಜ್ಞಾನಕ್ಕೆ ಭವಿಷ್ಯ ಬರೆದು ನಾಡಿನ ಹತ್ತು ಹಲವು ಯೋಜನೆಗಳ ರೂವಾರಿಯಾಗಿ ದೇವಶಿಲ್ಪವಾದ ದೇಶಭಕ್ತರು. ನಡೆನುಡಿಗಳ ಸಾಮರಸ್ಯ, ಸಮಯಪ್ರಜ್ಞೆಯ ಶ್ರೇಷ್ಠ ಪರಿಪಾಲಕರು. ದೂರದರ್ಶಿತ್ವ, ಕರಾರುವಾಕ್ಕಾದ ನಿರ್ಣಯ, ಪ್ರಾಮಾಣಿಕತೆಯ ಆರಾಧಕ, ಆಡಳಿತ ವಿಚಕ್ಷಣ ದಿಟ್ಟ ಧೀರ ಹೆಜ್ಜೆ, ಧೀರನಡೆ, ಗುಣೈಕಪಕ್ಷಬಂಧು, ಅಪರಿಮಿತ ಮಾತೃಭಕ್ತಿ, ಪಾಶ್ಚಾತ್ಯ ಉಡುಗೆತೊಡುಗೆ, ವೇಷಕ್ಕೆ ಮೈಸೂರು ಪೇಟದ ಶೃಂಗಾರಸಿರಿ, ಭಾಷಾಪ್ರೀತಿ, ಕ್ರಿಯಾಸಿದ್ಧಿಯ ಅಮೃತ ಪುರುಷರೆನಿಸಿ ಜನಕಲ್ಯಾಣದಲ್ಲಿ ಆತ್ಮಕಲ್ಯಾಣವನ್ನು ಕಂಡ ಭಾರತರತ್ನ ವಿಶ್ವೇಶ್ವರಯ್ಯನವರು ಮರೆಯಲಾಗದ ಸತ್ಪುರುಷರು.

ಕೃಷ್ಣರಾಜಸಾಗರ, ಬೃಂದಾವನ, ಭದ್ರಾವತಿಯ ಕಬ್ಬಿಣದ ಕಾರ್ಖಾನೆ, ವಾಣಿವಿಲಾಸಸಾಗರ, ಮೈಸೂರು ವಿಶ್ವವಿದ್ಯಾನಿಲಯ, ಕನ್ನಡ ಸಾಹಿತ್ಯ ಪರಿಷತ್ತು, ಮೈಸೂರು ಬ್ಯಾಂಕುಗಳ ರೂಪದಲ್ಲಿ ಶ್ರೀಯುತರು ಅರಳಿದ್ದು, ಜೀವನಕಲೆಯನ್ನು ದಾರ್ಶನಿಕರಂತೆ ಸಾಕ್ಷಾತ್ಕರಿಸಿಕೊಂಡದ್ದು ನಿಚ್ಚಳಗೆನಿಸುತ್ತದೆ. ಅಂತರಂಗ ಬಹಿರಂಗ ಶುದ್ಧಿಯ ನುಡಿನೇರ ನಡೆ ಗಂಭೀರವಾದ ಶ್ರೀಯುತರು ದಿವಾನರಾಗಿ ಮೈಸೂರು ಸಂಸ್ಥಾನವನ್ನು ಮಾದರಿ ರಾಜ್ಯವಾಗಿ ರೂಪಿಸುವುದರಲ್ಲಿ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರಿಗೆ ಬಲಗೈಯಾಗಿ ದುಡಿದವರು. ಅಪರೂಪದ ಪುಣ್ಯಪುರುಷರು.

'ಕರ್ಮಣ್ಯೈ ವಾಧಿಕಾರಸ್ಥೇ ಮಾಫಲೇಷ ಕದಾಚನ' ಎಂಬ ದೃಷ್ಟಿಶೀಲರು.

* * *

* ಬದುಕಿನಲ್ಲಿ ಬೆಳಕನ್ನು ಕಾಣಬೇಕಾದರೆ, ನೆಮ್ಮದಿಯ ಜೀವನ ಸಾಗಬೇಕಾದರೆ, ಶಾಂತಿ ಸಮೃದ್ಧಿಯ ಜೀವನದ ಅರಿವಿನ ಎಚ್ಚರದಿಂದ ಸಾಧ್ಯ. ಸಂತೋಷಕ್ಕೆ ಸಮನಾದ ಸುಖವಿಲ್ಲ. ಶಾಂತಿಗೆ ಸಮಾನವಾದ ತಪಸ್ಸಿಲ್ಲ. ವಿದ್ಯೆಗಿಂತ ಸಮನಾದ ಸಂಪತ್ತಿಲ್ಲ.
* ಜ್ಞಾನ ಶ್ರೇಷ್ಠ ರತ್ನ. ನಿಜವಾದ ಆಭರಣ, ಮೌಲ್ಯವುಳ್ಳ ವಸ್ತು. ಮನುಷ್ಯನನ್ನು ಪ್ರಾಣಿಗಳಿಂದ ಪ್ರತ್ಯೇಕಿಸುವ ಶ್ರೇಷ್ಠಜ್ಞಾನ. ಪರಮಾತ್ಮ ಮನುಷ್ಯನಿಗೆ ಜ್ಞಾನ ಕರುಣಿಸಿ, ಪ್ರಾಣಿಗಳೆಲ್ಲಾ ಮನುಷ್ಯನಿಗೆ ಮೊದಲ ಸ್ಥಾನವನ್ನು ದೊರಕಿಸಿದ. ಪರಮಾತ್ಮ ನೀಡಿದ ವಿಶೇಷ ವರ ಜ್ಞಾನ. ಜ್ಞಾನಾಭಿವೃದ್ಧಿ ಮಾಡಿಕೊಂಡು ಜೀವನದಲ್ಲಿ ಬೆಳಕು ಕಾಣುವುದು ಮಾನವನ ಗುರಿ.

## ವಚನ-ತ್ರಿವಿಧಿ

### ಶ್ರೀ ಸಿದ್ಧಲಿಂಗೇಶ್ವರ ವಚನ



ಐವರ ಮುಖದಲ್ಲಿ ಆರು ಮಂದಿ ಹುಟ್ಟಿ
ಎಲ್ಲರಿಗೆ ಕೈಯಾಗಿರ್ಪರು ನೋಡಾ,
ಹಲವರ ಕೈಯೊಳಗಿರ್ಪ
ಒಬ್ಬ ಚಾಂಡಾಲಗಿತ್ತಿ ಮೂರುಮುಖದಲ್ಲಿ
ಆರೂಢರ ನುಂಗಿದಳು ನೋಡಾ,
ಹಲವು ಕೈಗಳ ಹಾರ ಹೊಯಿದು ಮೂರು
ಮುಖದಂಗನೆಯ
ಶಿರವ ನೆರೆಯೇರಿ ಮೆಟ್ಟಿ ನಿಲಬಲ್ಲಡೆ
ಆತನು ನಿರ್ಮಲನು ಕಾಣಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ ॥

ಐವರ ಮುಖದಲ್ಲಿ –ಸದಾಶಿವನ ಪಂಚಮುಖದೊಳಗೆ, ಗೋಪ್ಯಮುಖದಲ್ಲಿ ಆರು ಮಂದಿಹುಟ್ಟಿ – ಭಾವಾದಿ ಷಟ್ಕರಣಂಗಳೆಂಬ ಪುತ್ರರುಗಳು ಉತ್ಪತ್ಯವಾಗಿ ಎಲ್ಲರಿಗೆ ಕೈಯಾಗಿರ್ಪರು – ಸಮಸ್ತ ಆತ್ಮರುಅಗ್ಗು ಸಕಲ ಪದಾರ್ಥಗಳನು ಗ್ರಹಿಸುವುದಕ್ಕೆ ಹಸ್ತಂಗಳಾಗಿರ್ಪರು, ನೋಡಾ– ಕಂಡಾ, ಹಲವರ ಕೈಯೊಳಗೆ – ಸಕಲಾತ್ಮರುಗಳು ಸಕಲ ಪದಾರ್ಥಗಳನು ಗ್ರಹಿಸುವುದಕ್ಕೆ ಹಸ್ತಂಗಳಾಗಿರುವ ಷಟ್ಕರಣಂಗಳಲ್ಲಿ ಇಪ್ಪ – ಇರುವ, ಇಬ್ಬ ಚಾಂಡಾಲಗಿತ್ತಿ ಮೂರು ಮುಖದಲ್ಲಿ ಆರೂಢರ ನುಂಗಿದಳು ನೋಡಾ : ಒಬ್ಬ ಚಾಂಡಾಳಗಿತ್ತಿ – ಚಾಂಡಾಲ ರೂಪಿಣಿಯಾದ ಮಾಯಾಶಕ್ತಿಯು, ಮೂರು ಮುಖದಲ್ಲಿ – ಮಲತ್ರಯಂಗಳೆಂಬ ವದನದಲ್ಲಿ, ಆರೂಢರ ನುಂಗಿದಳು : ಆರೂಢರ – ಪರಿಪೂರ್ಣ ಜ್ಞಾನದ ಹತ್ತಿಗೆಯುನುಳ್ಳಂಥ ಶರಣರ, ನುಂಗಿದಳು – ಅವಗ್ರಹಿಸಿದಳು, ನೋಡಾ–ಕಂಡಾ, ಹಲವು ಕೈಗಳ ಹಾರ ಹೊಯಿದು – ಸಕಲಾತ್ಮರುಗಳು ಸಕಲ ಪದಾರ್ಥಂಗಳ ಗ್ರಹಿಸುವುದಕ್ಕೆ ಹಸ್ತಂಗಳಾಗಿರುವ ಷಟ್ಕರಣಂಗಳ ವರ್ತನೆಯ ನಷ್ಟವ ಮಾಡಿ, ಮೂರು ಮುಖದಂಗನೆಯ – ಮಲತ್ರಯಂಗಳೆ ವದನವಾಗುಳ್ಳ ಮಾಯಾಶಕ್ತಿಯು, ಶಿರವ ನೆರೆಯೇರಿ ಮೆಟ್ಟಿ ನಿಲಬಲ್ಲಡೆ : ಶಿರವ – ಮಸ್ತಕವನು, ಏರಿ – ಆರೋಹಣವಾಗಿ, ಮೆಟ್ಟಿ – ಅಧಸ್ಸು ಮಾಡಿ ತುಳಿದು, ನಿಲಬಲ್ಲಡೆ – ಸ್ಥಿತವಾಗಬಲ್ಲಡೆ, ಆತನು – ಅಂತಪ್ಪಾತನು, ನಿರ್ಮಾಯನು – ಮಾಯಾಪ್ರಪಂಚಿಗೆ ಮೀರಿ ತೋರಲ್ಪಟ್ಟಾತನು, ಕಾಣಾ–ಕಂಡಾ, ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ– ಸಂಪಾದಕರು– ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ(ರಿ.) ಎಡೆಯೂರು– ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)

### ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಅಂತರಂಗದ ಕುದಿಗೆ ಒಳಗಾಗದ ಬದುಕು
ಚಿಂತೆ ಚಿತೆಯೊಳಗೆ ಬೆಂದಪುದು । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಸವಣ್ಣನ ನೆನೆದರೆ ಹಸನಾಗುವುವೀ ಬದುಕು
ಬಸವಣ್ಣನೇ ದೈವ ಮನುಕುಲಕೆ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀರಮೇಲೆ ತಾನೆಣ್ಣೆ ತೇಲುವ ವೋಲು
ಯಾರೊಂದಿಗಾದರೂ ನೀಬಾಳು । ಹರಸೀವ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲಿಂಗಕ್ಕರ್ಪಿಸದೆ ಸಲಿಸದಿರು ಏನನ್ನು
ಅಂಗದಿಚ್ಛೆಗೆ ಬಾಯಿ ಬಿಡಬೇಡ । ನೀನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಎಣ್ಣೆ ಬತ್ತಿ ಕೂಡಿ ಜ್ಯೋತಿ ಉರಿವಂದದಲಿ
ಅರಿವು ಆಚಾರಗಳು ಬೆಸದಿರಲಿ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜ್ಞಾನಕ್ರಿಯಾರೂಪ ಸಾಕಾರವಾಗಿರುವೆ
ಮಾನನಿಧಿ ಮಂಗಲ ಶ್ರೀಗುರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸೇವೆಯೆ ಶಿವಯೋಗ ಕಾಯಕವೆ ಶಿವಪೂಜೆ
ಮಾನವೀಯತೆಯೆ ಶಿವಧರ್ಮ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲಿಂಗವಂತನಾಗಿ ಅಂಗಸಂಗವಮಾಡಿ
ಕಂಗಳಿಚ್ಛೆಗೆ ಎಳಸದಿರು । ನೀವೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತನುವ ಸಂತೈಸಿಕೋ ಮನವಸಂತೈಸಿಕೋ
ತನುಮನವ ಬಸವನಲಿ ಸಂತೈಸು । ನೀನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಇಹ–ಪರವೆಂಬವು ಅವಳಿ ಜವಳಿ ರತ್ನ
ಇಹವು ಪರಕೆ ಹಿಡಿದ ಕೈದೀಪ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪ್ರೊ. ಹೆಚ್.ವಿ. ವೀರಭದ್ರಯ್ಯ



## ಚಿಂತನ



# ವಿದ್ಯಾವಾರಿಧಿ

– ಶ್ರೀ ಸಿದ್ಧೇಶ್ವರ ಸ್ವಾಮಿಗಳು *

ಶ್ರೀ ಗುರುವು ಆಧ್ಯಾತ್ಮಿಕ ಸಾಮ್ರಾಜ್ಯದ ಅನಭಿಷಕ್ತ ಚಕ್ರವರ್ತಿ. ಆತ್ಮವಿದ್ಯಾವಾರಿಧಿ, ಆತ್ಮಾನುಭವದ ಮೂಲಸ್ರೋತ್ರ. ಈ ಅಮೃತವಿದ್ಯೆಯು ಗುರುವಿನ ಅಂತರಂಗಕ್ಕೆ ಮೊದಲು ಅವತರಿಸುತ್ತದೆ. ಲೋಕಕಲ್ಯಾಣಕ್ಕಾಗಿ ಆತನ ಶ್ರೀಮುಖದಿಂದ ಹೊರಹೊಮ್ಮುತ್ತದೆ. ಅದೇ ಪವಿತ್ರವಚನ ! ಪ್ರವಚನಾಮೃತ ಸಿಂಚನ !!

ಪತಂಜಲರು ಆತ್ಮಾನುಭಾವಿಗಳು. ಪರಮಯೋಗಾಚಾರ್ಯರು. ನಿರ್ವಿಕಲ್ಪ ಸಮಾಧಿಯ ನಿಜಾನುಭಾವಿಗಳು. ಅವರು ಪರಮಗುರುವಿನ ಕುರಿತು ಒಂದು ಮಾತನ್ನು ಹೇಳುತ್ತಾರೆ.

ಪೂರ್ವೇಷಾಮಪಿ ಸಃ ಗುರು ಕಾಲೇನ ಅನವಚ್ಛೇದಾತ್

ಜಗತ್ತಿನ ಅಂದಿನ, ಇಂದಿನ ಗುರುಗಳೆಲ್ಲರ 'ಗುರುತ್ವ' ಯಾವುದು ಎಂಬುದನ್ನು ಅಚ್ಚಳಿಯದೆ ನಾಲ್ಕೈದು ಶಬ್ದಗಳಲ್ಲಿ ಅಂದವಾಗಿ ವರ್ಣಿಸಿರುವರು. 'ಕಾಲದಿಂದ ಎಂದೆಂದೂ ಅವಚ್ಛೇದನವಾಗದ ತತ್ತ್ವಜ್ಞಾನವುಳ್ಳವನೇ ಪರಮಗುರು.'

ಜಗತ್ತಿನ ಎಲ್ಲ ವಸ್ತುಗಳು ಕಾಲದಿಂದ ಅವಿಚ್ಛಿನ್ನವಾಗಿವೆ. ಅಂತೆಯೇ ಅವುಗಳ ಜ್ಞಾನವಾದರೂ ಕಾಲದಿಂದ ಖಂಡಿತವಾಗಿದೆ. ಈ ಕ್ಷಣದಲ್ಲಿ ಹೂವಿನ ಜ್ಞಾನ. ಇನ್ನೊಂದು ಕ್ಷಣದಲ್ಲಿ ಹಣ್ಣಿನ ಜ್ಞಾನ, ಮತ್ತೊಂದು ಕ್ಷಣದಲ್ಲಿ ಮಣ್ಣಿನ ಜ್ಞಾನ.

ಹೂವಿನ ಜ್ಞಾನ ಇರುವ ಕ್ಷಣದಲ್ಲಿ ಹಣ್ಣಿನ ಜ್ಞಾನವಿಲ್ಲ. ಹಣ್ಣಿನ ಜ್ಞಾನ ಇರುವ ಕ್ಷಣದಲ್ಲಿ ಹೂವಿನ ಜ್ಞಾನವಿಲ್ಲ. ಹೂವು-ಹಣ್ಣುಗಳ ನೆನಹು ಇರಬಹುದು. ನೆನಹು ಜ್ಞಾನವಲ್ಲ. ಈ ಹೂವು, ಹಣ್ಣು, ಮಣ್ಣುಗಳೆಲ್ಲ ಅಶಾಶ್ವತ, ಕ್ಷಣಿಕ. ಆದ್ದರಿಂದ ಅವುಗಳ ಜ್ಞಾನವಾದರೂ ಕ್ಷಣವರ್ತಿಯಾಗಿದೆ.

ಜಗತ್ತಿನಲ್ಲಿ ಇಂಥ ವಸ್ತುಗಳು ಅಸಂಖ್ಯ. ಅವುಗಳ ಜ್ಞಾನದ ತುಕಡಿಗಳು ಭಿನ್ನಭಿನ್ನ. ಕೆಲವರು ಹೆಚ್ಚು ವಸ್ತುಗಳನ್ನು ನೋಡುತ್ತಾರೆ. ಕೇಳುತ್ತಾರೆ. ಕಲ್ಪಿಸುತ್ತಾರೆ. ಆ ವಸ್ತುಗಳ ಜ್ಞಾನದ ತುಕಡಿಗಳನ್ನು ತಮ್ಮ ತಲೆಯಲ್ಲಿ ಶೇಖರಿಸಿಕೊಳ್ಳುತ್ತಾರೆ. ಅವರು ವಿದ್ಯಾವಂತರು, ಪಂಡಿತರು.

ಈ ಕ್ಷಣವರ್ತಿಜ್ಞಾನಗಳ ಸೀಮೆಗಳನ್ನು ತೆಗೆದಾಗ ನಿಸ್ಸೀಮ ಕಾಲಾತೀತಜ್ಞಾನ ಉಳಿಯುತ್ತದೆ. ಅದು ಹೂವಿನ ಜ್ಞಾನವಲ್ಲ. ಹಣ್ಣಿನ ಜ್ಞಾನವಲ್ಲ. ಅದು ಕೇವಲ ಜ್ಞಾನ ! ಮಹಾಪ್ರಜ್ಞೆ ! ಅದು ಅನಂತ, ಅಖಂಡ, ಅದ್ವಿತೀಯ !! ಅದರ ಅರಿವು ಅನುಭವವುಳ್ಳಾತನೇ ಪರಮಗುರುವು. ಆ ಮಹಾಪ್ರಜ್ಞೆಯ ಹೊಳಹನ್ನುಳ್ಳ ಈ ಪರಮಗುರುವಿಗೆ ಜಗತ್ತಿನ ಬೇರೆ ಬೇರೆ ಧರ್ಮಗ್ರಂಥಗಳ ಪರಿಚಯವಿಲ್ಲದಿರಬಹುದು. ಅವೆಲ್ಲವೂ ಆತನ ಮಹಾಪ್ರಜ್ಞೆಯ ಸಾಗರದಲ್ಲಾಡುವ ತೆರೆಗಳು, ವಿಚಾರ ವೀಚಿಗಳು.

ಕೆರೆ, ಹಳ್ಳ, ಬಾವಿಗಳನ್ನು ಬಲ್ಲವರು ಗುರುಗಳು. ಮಹಾಸಾಗರದ ಅಂತರಂಗ, ನೆಲೆಕಲೆ, ಘನಗಂಭೀರತೆಯನ್ನು ಬಲ್ಲವ ಮಹಾಗುರು. ಆತ ಕೇವಲ ಗ್ರಂಥಗಳನ್ನು ಓದಿ ಕೇಳಿ ಮಾತನಾಡುವುದಿಲ್ಲ. ಆತನ ಅಂತರಂಗದಿಂದ, ಪ್ರಜ್ಞಾಸಾಗರದಿಂದ ತಾವೇ ತಾವಾಗಿ ನುಡಿಮುತ್ತುಗಳು ಹೊರಹೊಮ್ಮುತ್ತವೆ.

ಸಾಗರಾಂತರ್ಯದಲ್ಲಿ ಜೀವಿಸುವ ತಿಮಿಂಗಿಲಾದಿಗಳು ಸಾಗರದ ರುದ್ರ ರಮಣೀಯತೆಯನ್ನು ಬಲ್ಲವು. ಸಾಗರದ ದಡದಲ್ಲೀಜುವ ಮರಿಮೀನುಗಳು, ಕಿರು ಕಪ್ಪೆಗಳೇನು ಬಲ್ಲವು? ಆ ಮಹಾಪ್ರಜ್ಞಾಸಾಗರದ ಅಂತರಂಗವ ಬಗೆದು ಬಂದವ ಪರಮಗುರು. ಸಚ್ಚಿದಾನಂದ ಸ್ವರೂಪನಾದ ದೇವನ ವಿರಾಡ್ರೂಪವನ್ನು ಅವನೇ ಬಲ್ಲನು. ಸಾಗರದ ತೆರೆಯ ಮೇಲಾಡುವ, ದಡದಲ್ಲಿರುವ ನಾವೇನು ಬಲ್ಲೆವು?

ಈ ಜಗತ್ತು ಆ ಮಹಾಪ್ರಜ್ಞಾಸಾಗರದ ಮೇಲೆ ತೋರಿದ ತೆರೆ. ತೆರೆಯ ರೂಪದ ಈ ಜಗವನ್ನರಿತ ಗುರು. ಇಂಥ ಅನಂತ ತೆರೆಗಳಿಗಾಧಾರವಾದ ಜಗದೀಶನನ್ನರಿತವ ಪರಮಗುರು.

ದೇವರು ಅನಂತಪ್ರಜ್ಞೆಯ ಮಹಾಸಾಗರ. ಪರಮ ಗುರುವು ಈ ಅನಂತಪ್ರಜ್ಞೆಯನ್ನು ಅನವರತ ತನ್ನಂತರದಲ್ಲಿ ಧರಿಸಿರುವನು. ಆದ್ದರಿಂದ ಈ ಗುರುವೂ ಆ ದೇವರ ಸ್ವರೂಪನೇ ! ಈಶ್ವರನೇ !! ಎನ್ನುತ್ತಾರೆ ಪತಂಜಲಿ ಮಹರ್ಷಿಗಳು. ಅಂತೆಯೇ

**ಗುರುರ್ಬ್ರಹ್ಮಾ ಗುರುರ್ವಿಷ್ಣುಃ ಗುರುರ್ದೇವೋ ಮಹೇಶ್ವರಃ ।**
**ಗುರುಸಾಕ್ಷಾತ್ ಪರಬ್ರಹ್ಮತಸ್ಮೈ ಶ್ರೀ ಗುರುವೇ ನಮಃ॥**

ಎಂದಿದೆ ಶ್ರುತಿ.

* ಜ್ಞಾನಯೋಗಾಶ್ರಮ, ಬಿಜಾಪುರ ಜಿಲ್ಲೆ.







ಇಂಥ ಪರಮಗುರುವಿನ ಪವಿತ್ರಸಾನ್ನಿಧ್ಯವನ್ನರಸಿ ಬಂದವನೇ ಸಚ್ಛಿಷ್ಯ. ಅವರಿಬ್ಬರೂ ಒಂದೆಡೆ ಸಂಧಿಸುತ್ತಾರೆ. ಏತಕ್ಕೆ...?

ನಮ್ಮ ಹಿತ್ತಲಿನಲ್ಲಿ ಹೂವರಳಿದೆ. ನಮಗೇ ಗೊತ್ತಿಲ್ಲ. ಎಲ್ಲೋ ಇರುವ ದುಂಬಿ ಈ ಹೂವನ್ನರಸಿಕೊಂಡು ಬರುತ್ತದೆ. ಈ ಹೂವೇನು ದುಂಬಿಯನ್ನು ಕೈಮಾಡಿ ಕರೆಯಲಿಲ್ಲ. ಫಲತಾಂಬೂಲ ನೀಡಿ ಆಮಂತ್ರಿಸಲಿಲ್ಲ. ನಮ್ಮ ಹಿತ್ತಲಿನಲ್ಲಿರುವ, ನಮಗೆ ಗೊತ್ತಾಗದ ಈ ಹೂವು ದುಂಬಿಗೆ ಗೊತ್ತಾದುದು ಹೇಗೆ?

ಅದೇ ದುಂಬಿಯ ವೈಶಿಷ್ಟ್ಯ. ಅರಳಿದ ಹೂವು ಮಕರಂದವನ್ನು ತುಂಬಿಕೊಂಡು, ಸುಗಂಧ ಸೂಸುತ್ತದೆ. ಹೂವಿನ ಅಂತರಾಳದಲ್ಲಿರುವ ಮಕರಂದವನ್ನು ದುಂಬಿಯ ಹೃದಯ ಗುರುತಿಸುತ್ತದೆ. ಹೂವಿದ್ದಲ್ಲಿಗೆ ಧಾವಿಸುತ್ತದೆ.

ದುಂಬಿ ಹೂವಿನ ಹೊರರೂಪವನ್ನು ನೋಡಿ ಬಂದುದಲ್ಲ. ಹಾಗಿದ್ದರೆ ನಮ್ಮ ಮನೆಯೊಳಗೆ ತೋಟದ ಹೂವಿಗಿಂತಲೂ ನೂರ್ಮಡಿ ಚೆಲುವಾದ ಬಟ್ಟೆಯ, ಬಣ್ಣದ, ಕಾಗದದ ಪ್ಲಾಸ್ಟಿಕ್ಕಿನ ಹೂವುಗಳಿವೆ. ಎಂದಾದರೂ ದುಂಬಿ ಅವುಗಳನ್ನರಿಸಿಕೊಂಡು ಬಂದಿತ್ತೆ?

ಸದ್ಗುರುವು ಭಗವತ್ ಕ್ಷೇತ್ರದಲ್ಲಿ ಅರಳಿದ ಅಮರಪುಷ್ಪ, ಆತನಂತರಂಗದಲ್ಲಿ ಆತ್ಮಾನುಭವದ ಮಕರಂದ. ನುಡಿಯಲ್ಲಿ ಸುಜ್ಞಾನದ ಸೌರಭ. ನಡೆಯಲ್ಲಿ ಮಹದಾನಂದದ ಮಧು. ಅದನ್ನೆಲ್ಲವನ್ನೂ ಪಡೆಯುವ ಅದಮ್ಯವಾದ ಹಂಬಲವನ್ನು ತನ್ನ ಹೃದಯದಲ್ಲಿ ತುಂಬಿಕೊಂಡಿರುವ ಶಿಷ್ಯನೇ ದೇವದುಂಬಿ.

ಆತ ಗುರುವಿನ ಬಾಹ್ಯರೂಪವನ್ನು, ಘನತೆಗೌರವವನ್ನು, ಸ್ಥಾನಮಾನವನ್ನು ನೋಡಿ ಬಂದವನಲ್ಲ. ಆ ಮಹಾಗುರುವಿನ ಅಂತರಂಗದ ಅಖಂಡ ಅನುಭಾವಾಮೃತವನ್ನು ಸವಿದು ಸಚ್ಚಿದಾನಂದಘನವನ್ನು ಅನುಭವಿಸ ಬಂದವನು.

ಅವರಿಬ್ಬರ ಸಂಬಂಧ ಅಲೌಕಿಕವಾದುದು. ಕೊಡ-ಕೊಳ್ಳುವ ಲೌಕಿಕಸಂಬಂಧ ಅವರಲ್ಲಿಲ್ಲ. ಸತ್ಯಾನುಭೂತಿಗಾಗಿ ಸಮಸ್ತ ಜಗತ್ತನ್ನೇ ಸರಿಸಿ ಬಂದವ ಗುರು. ಇಂಥ ಪರಮ ವಿರಾಗಿಯ ಪವಿತ್ರಸಾನ್ನಿಧ್ಯದಲ್ಲಿ ಆತ್ಮಾನುಭೂತಿಯ ಪಡೆಯ ಬಂದವ ಶಿಷ್ಯ. ಅವರು ನಿತ್ಯತೃಪ್ತರು. ಆನಂದವಿಹಾರಿಗಳು. ಅವರಲ್ಲಿ ಲೌಕಿಕವಾಗಿ ಕೊಡಕೊಳ್ಳುವುದೇನಿದೆ?

**ಆಚಾರ್ಯಃ ಪೂರ್ವರೂಪಂ ಅಂತೇವಾಸಿ ಉತ್ತರರೂಪಮ್ ।**

**ವಿದ್ಯಾಸಂಧಿಃ ಪ್ರವಚಮನುಸಂಧಾನಮ್ ॥**

ಅವರಿಬ್ಬರಲ್ಲಿ ಇರುವುದು ಒಂದೇ ಒಂದು ಸಂಧಿ, ಸಂಬಂಧ; ಅದು ಆತ್ಮ ವಿದ್ಯಾಸಂಧಿ. ಗುರು ಪೂರ್ವರೂಪ, ಶಿಷ್ಯ ಉತ್ತರರೂಪ. ಅವರೀರ್ವರ ಗುರಿ ಪರಮಾನುಭವ ಬೋಧೆ ಸವಿಯುವುದು.

ಆ ಪರಮಗುರುವು ನಮ್ಮ ಗುರುವಲ್ಲ. ನಿಮ್ಮ ಗುರುವಲ್ಲ. ಯಾರ ಗುರುವೂ ಅಲ್ಲ. ಆತ ಜಗದ ಗುರು. ಜಗದ್ಗುರು. ಅನಂತಾಗಸ, ಅಖಂಡ ಬಯಲು ಯಾರವು? ನಮ್ಮ ಊರ ಮೇಲಿರುವ ಆಗಸ, ನಮ್ಮ ಮನೆಯೊಳಿರುವ ಬಯಲು ನಮ್ಮವೇ? ''ನೀವಾರವರು?'' ಎಂದು ಆಗಸಕ್ಕೆ, ಬಯಲಿಗೆ ಕೇಳಿದರೆ ಅವು ನಗದೆ ಸುಮ್ಮನಿರಲು ಸಾಧ್ಯವೆ? ಮಹಾಗುರುವು ನಿರಾಭಾರಿದೇಶಿಕೋತ್ತಮನು, ದೇಶಕಾಲಾತೀತನು.

ಅಂಥ ಗುರು-ಶಿಷ್ಯರ ಸಂಬಂಧ ಅನಿರ್ವಚನೀಯ, ಅವರ್ಣನೀಯ, ಅನಿಮಿತ್ತ. ಜನ್ಮಕೊಟ್ಟ ನಿಮಿತ್ತದಿಂದ ತಂದೆ-ತಾಯಿ. ಒಡಹುಟ್ಟಿದ ನಿಮಿತ್ತದಿಂದ ಸಹೋದರ-ಸಹೋದರಿಯರು. ಕೈಹಿಡಿದ ನಿಮಿತ್ತದಿಂದ ಸತಿ-ಪತಿ. ಹೀಗೆ ಪ್ರಾಪಂಚಿಕ ಎಲ್ಲ ಸಂಬಂಧಗಳು ಒಂದೊಂದು ನಿಮಿತ್ತದಿಂದಾಗಿವೆ. ಈ ನಿಮಿತ್ತಗಳಿಲ್ಲದಿದ್ದರೆ ಅವರು ನಮ್ಮತ್ತ ಹೊರಳಿಯೂ ನೋಡರು.

ಗುರುಶಿಷ್ಯರಲ್ಲಿ ಪ್ರಾಪಂಚಿಕವಾದ ಈ ಯಾವ ನಿಮಿತ್ತವೂ ಇಲ್ಲ. ಆದ್ದರಿಂದ ಗುರುವು ನಮಗೆ ಅನಿಮಿತ್ತಬಂಧು. ಆದರೂ ಗುರುವಿಗೆ ಶಿಷ್ಯರ ಮೇಲೆ ಅಸದೃಶಪ್ರೇಮ. ತಂದೆ ತಾಯಿ ಬಂಧುಬಳಕ್ಕೂ ಮೀರಿದ ಅನನ್ಯಮಮತೆ ಈ ಮನುಕುಲದ ಮೇಲೆ. ಪರಮಗುರುವು ಅನಿಮಿತ್ತವಿಶ್ವಬಂಧು. ಆದರೂ ಗುರುವಿಗೆ ಶಿಷ್ಯರ ಮೇಲೆ ಅಸದೃಶಪ್ರೇಮ. ತಂದೆ ತಾಯಿ ಬಂಧುಬಳಗಕ್ಕೂ ಮೀರಿದ ಅನನ್ಯಮಮತೆ ಈ ಮನುಕುಲದ ಮೇಲೆ. ಪರಮಗುರುವು ಅನಿಮಿತ್ತವಿಶ್ವಬಂಧು.

ಅನಿಮಿತ್ತಬಾಂಧವನಾದ ಈ ಪರಮಗುರುವಿನ ಶಿಷ್ಯವಾತ್ಸಲ್ಯ ಅನುಪಮವಾದುದು. ಮಹಾಮೇಧಾವಿಯಾಗಿದ್ದ ನರೇಂದ್ರನ ಮೇಲೆ ಪರಮಹಂಸರಿಗೆ ಅಪಾರಪ್ರೇಮ. ನರೇಂದ್ರನಿಗೆ ಏನೆಲ್ಲ ಅನುಭವಾಮೃತ ಉಣಬಡಿಸುವ ಹಂಬಲ ಅವರಿಗೆ. ಒಂದೊಂದು ದಿನ ನರೇಂದ್ರನು ಸತ್ಸಂಗಕ್ಕೆ ಬರಲು ತಡಮಾಡುತ್ತಿದ್ದನು. ಆಗ ಪರಮಹಂಸರು ನರೇಂದ್ರನ ಬರುವಿಗಾಗಿ ಒಂದೇಸಮನೆ ಪರಿತಪಿಸುತ್ತಿದ್ದರು. ಕೆಚ್ಚಲು ದುಂಬಿದ ತಾಯಿ ಹಸು ಕರುವಿಗಾಗಿ ದಾರಿಕಾಯುವಂತೆ, ಕಾಯುವರು. ನರೇಂದ್ರರು ಬಾರದಿದ್ದರೆ ಕಣ್ಣೀರಿಡುವರು. ಗುರುಕರುಣೆ ನಿಸ್ಸೀಮವಾದುದು!

ಭಗವಾನ್ ಬುದನು ಜ್ಞಾನೋದಯಕ್ಕೆ ಮೊದಲು ನಿರಾಹಾರಿಯಾಗಿ ಕಠೋರ ತಪವನಾಚರಿಸಿದನು. ಆಗ ಬುದ್ಧನ ಸೇವೆಗೆಂದು ನಾಲ್ಕೈದು ಜನ ಶಿಷ್ಯರಿದ್ದರು. ಒಂದು ದಿನ ಬುದ್ಧನು ಕ್ಷುದ್ಬಾಧೆಯನ್ನು ನೀಗಲು ಒಂದಿಷ್ಟು ಆಹಾರ ಸ್ವೀಕರಿಸಿದನು. ಅದೇ ಘೋರ ಅಪಚಾರವೆಂದು ಬಗೆದರು ಶಿಷ್ಯರು. ಬುದ್ಧನ ತಪಸ್ಸು ಕೆಟ್ಟಿತು. ಇನ್ನು ನಾವಿಲ್ಲಿರಬಾರದೆಂದು ಶಿಷ್ಯರು ಬುದ್ಧನನ್ನು ತೊರೆದು ಹೋದರು.

ಮುಂದೆ ಕೆಲವೇ ದಿನಗಳಲ್ಲಿ ಬುದ್ಧನು ಸಕಲ ಆಶೆಯನ್ನು ಜಯಿಸಿದ್ದ. ಆತನ ಹೃದಯ ಹಸನಾಗಿತ್ತು. ಸತ್ಯದರ್ಶನವಾಗಿತ್ತು. ಪರಮಶಾಂತಿಯನ್ನು ಅನುಭವಿಸಿದ್ದ. ಮರುಕ್ಷಣವೇ ಬುದ್ಧನು ತನ್ನನ್ನು ಸೇವಿಸಿದ ಶಿಷ್ಯರನ್ನು ಹುಡುಕಿಕೊಂಡು ಹೊರಟಿದ್ದ. ಅವರು ಬುದ್ಧನನ್ನು ತೊರೆದರೂ, ಬುದ್ಧ ಅವರನ್ನು ತೊರೆಯಲಿಲ್ಲ. ಅವರಿಗೆ ಸತ್ಯಾಮೃತವನ್ನು ಉಣಬಡಿಸಬೇಕು. ಅವರನ್ನು







ನಿರ್ವಾಣದ ಹಂತಕ್ಕೆ ತಲುಪಿಸಬೇಕೆಂದು ಹೊರಟಿದ್ದ. ಒಂದೆಡೆ ಶಿಷ್ಯರು ಕಾಣಿಸಿದರು. ಆದರೆ ಮತ್ತೆ ಬಂದ ಈ ತೋಪಭ್ರಷ್ಟಎಂದು ಅವರೆಲ್ಲ ಓಡಲೆತ್ನಿಸಿದರು. ಕರುಣಾಮಯಿ ಬುದ್ಧನೂ ಅವರ ಹಿಂದೆ ಓಡಿದ. ಕುತೂಹಲಕ್ಕೆಂದು ಶಿಷ್ಯರು ಒಂದಿಷ್ಟು ಹಿಂದಿರುಗಿ ನೋಡಿದರು.

ತಮ್ಮ ಹಿಂದೆ ಪ್ರೇಮಸಾಗರವೇ ಹರಿದು ಬರುತ್ತಿರುವುದನ್ನು ಕಂಡರು. ಬುದ್ಧನ ಮುಖದಲ್ಲಿ ಪ್ರಸನ್ನತೆ. ಕಣ್ಣಲ್ಲಿ ದಿವ್ಯತೇಜ. ನಡೆಯಲ್ಲಿ ದಯೆ. ನುಡಿಯಲ್ಲಿ ಕಾರುಣ್ಯ. ಅಡಿಯಡಿಗೂ ಶಾಂತಿಯ ಸಂದೇಶ. ಅವೆಲ್ಲವೂ ಒಂದುಗೂಡಿ ಮಾಡಿದ ಬುದ್ಧನ ದಯಾಮೂರ್ತಿಯನ್ನು ಕಾಣುತ್ತಲೇ ಶಿಷ್ಯರು ಪರಮಶಾಂತಿಯನ್ನು ಅನುಭವಿಸಿದರು. 'ಬುದ್ಧಂ ಶರಣಂ ಗಚ್ಛಾಮಿ' ಎಂದು ಬುದ್ಧನ ಅಡಿಗೆ ಎಡೆಯಾದರು. ಹತ್ತು ರೂಪಾಯಿ ದಕ್ಷಿಣೆ ಬರುವಲ್ಲಿ ಐದು ಪೈಸೆ ಕಡಿಮೆ ಬಂದರೆ ಕೊರಗುವ ನಾವೆಲ್ಲಿ? ಆ ಮಹಾಗುರುವೆಲ್ಲಿ?

ಅದೇ ಶಿಷ್ಯರನ್ನು ಕರೆದುಕೊಂಡು ಬುದ್ಧನು ಜಗಕ್ಕೆ ಶಾಂತಿಸಂದೇಶವನ್ನು ಸಾರಲು ಹೊರಟ. ಉತ್ತರಭಾರತದ ತುಂಬೆಲ್ಲ ಸಂಚರಿಸಿ ದೀನರ, ದುಃಖಿಗಳ ಕಣ್ಣೀರು ಒರೆಸಿದ. ಹೇಳದೆ-ಕೇಳದೆ, ಕರೆಯದೆ-ಕರೆಯಿಸಿಕೊಳ್ಳದೆ ತಾನಾಗಿಯೇ ಊರೂರಿಗೆ ಹೋಗಿ ಪರಮಶಾಂತಿಯ ಸಂದೇಶ ಸಾರಿದ. ಜನಮನ ಅರಳಿದ ಹೂವಿನಂತಾಗಿತ್ತು ! ಎಲ್ಲೆಲ್ಲೂ ಪ್ರೀತಿಯ ಸೌರಭ ತುಂಬಿ ನಿಂತಿತ್ತು!

ಇಂಥ ಗುರುಶಿಷ್ಯರ ಪವಿತ್ರ ಸಂಬಂಧವನ್ನು ಕುರಿತು ಅಲ್ಲಮಪ್ರಭುದೇವರ ಒಂದು ಸುಂದರವಚನವಿದೆ.

**ಎತ್ತಣ ಮಾಮರ ಎತ್ತಣ ಕೋಗಿಲೆ, ಎತ್ತಣಿಂದೆತ್ತ ಸಂಬಂಧವಯ್ಯಾ?**
**ಬೆಟ್ಟದ ಮೇಲಣ ನೆಲ್ಲಿಯಕಾಯಿ, ಸಮುದ್ರದೊಳಗಣ ಉಪ್ಪು**
**ಎತ್ತಣಿಂದೆತ್ತ ಸಂಬಂಧವಯ್ಯಾ?**
**ಗುಹೇಶ್ವರಲಿಂಗಕ್ಕೆಯೂ ಎನಗೆಯೂ ಎತ್ತಣಿಂದೆತ್ತ**
**ಸಂಬಂಧವಯ್ಯಾ?**

ಮಾಮರ ಚಿಗುರಿದೆ. ಹೂ ಬಿಟ್ಟು ಸುತ್ತ ಸುವಾಸನೆ ಹರಡಿದೆ. ವಸಂತ ಮೆಲ್ಲನೆ ಸುಳಿದಿದೆ. ದೂರದೇಶದಲ್ಲಿದ್ದ ಕೋಗಿಲೆಯ ಹೃದಯದಲ್ಲಿ ಮಾಮರದ ಚಿತ್ರ ಮೂಡಿತ್ತು. ನೋಡು ನೋಡುವುದರಲ್ಲಿ ಕೋಗಿಲೆಯು ಹಾರಿ ಬಂದು ಮಾಮರವನೇರಿತ್ತು. ಸಂತಸದ ವಸಂತಗಾನ ಮಾಡಿತ್ತು. ಭುವಿಯೆ ನಂದನವನವಾಗಿತ್ತು.

ಗುರುವು ಒಂದು ಮಾಮರದಂತೆ. ಸುಜ್ಞಾನದ ಚಿಗುರೊಡೆದು ಸ್ವಾನುಭಾವದ ಫಲ ಬಿಡಬೇಕು. ಆಗ ಎಲ್ಲಿಂದಲೋ ಒಬ್ಬ ಶಿಷ್ಯ ಕೋಗಿಲೆಯಂತೆ ಬರುವನು. ಆ ಪರಮಾನುಭವದ ಫಲವನುಂಡು ಮಹದಾನಂದಗೀತೆಯ ಹಾಡುವನು.

**ಗುರೋಸ್ತು ಮೌನಂ ವ್ಯಾಖ್ಯಾನಂ ಶಿಷ್ಯಸ್ತು ಛಿನ್ನಸಂಶಯಃ**

ಫಲಭರಿತ ಮಾಮರದಂತೆ ಪಕ್ವ ಹೃದಯದ ಗುರುವೂ ಮೌನವಾಗಿರಬಹುದು. ತಪೋನಿಧಿಯ ಆ ಮೌನವೇ ಮಹಾ ವ್ಯಾಖ್ಯಾನವಾಗುತ್ತದೆ ಸತ್ಯದರ್ಶನಕ್ಕೆ. ಅಂತೆಯೇ ಪರಮಗುರುವಿನ ದರ್ಶನವಾಗುತ್ತಲೇ ಶಿಷ್ಯನ ಸಂಶಯಗಳೆಲ್ಲ ನಿರಸನವಾಗುತ್ತವೆ. ನಿಜಾನಂದವು ಸಮನಿಸುತ್ತದೆ.

ಬೆಟ್ಟದ ನೆಲ್ಲಿ ಉರುಳಿ ಸಮುದ್ರದ ದಂಡೆಯ ಕಂಡಿದೆ. ಸಮುದ್ರದ ಉಪ್ಪು ನೆಲ್ಲಿಯನ್ನು ಮೆತ್ತಿಕೊಂಡಿದೆ. ಈಗ ಆ ನೆಲ್ಲಿಯನ್ನು ಸವಿದ ಮೀನಿನ ಸಂತಸಕ್ಕೆ ಸೀಮೆಯುಂಟೆ? ಗುರುಶಿಷ್ಯರೊಂದಾದ ಮೇಲೆ ಆತ್ಮಾನುಭವದ ಮಧುರತೆಗೊಂದು ಮೇರೆಯುಂಟೆ?

ಆ ಮಹಾಗುರುವಿನ ಮಹತಿಯನರುಪುವ ಒಂದು ಸುಂದರಘಟನೆ- ಅಲೆಗ್ಸಾಂಡರನು ಮೆಥೆಡೋನಿಯಾ ಪಟ್ಟಣದ ಮಹಾಪ್ರಭುವಾದ ಫಿಲಿಪ್ಸನ ಮಗ. ತಂದೆಯು ಮಗನಿಗೆ ಶೌರ್ಯ, ಧೈರ್ಯ, ಐಶ್ವರ್ಯವನ್ನೆಲ್ಲ ಕೊಟ್ಟು, ಬೆಳೆಸಿ, ರಾಜಗದ್ದುಗೆಯ ಮೇಲೆ ಕೂಡ್ರಿಸಿದ. ಅಲೆಗ್ಸಾಂಡರನು ಮಹಾಜ್ಞಾನಿ ಅರಿಸ್ಟಾಟಲನಿಗೆ ಶಿಷ್ಯನಾಗಿದ್ದ. ಗುರು ಅರಿಸ್ಟಾಟಲನಿಗೆ ಸಿರಿಸಂಪದವೇನಿಲ್ಲ, ಆತನ ಶಿಷ್ಯಸಮೂಹವೇ ಅವನ ಏಕೈಕ ಆಸ್ತಿ. ಆದರೂ ರಾಜನಿಗೆ ಗುರುವಿನಲ್ಲಿ ಅಪಾರಭಕ್ತಿ.

ಒಂದು ದಿನ ಅಲೆಗ್ಸಾಂಡರ್ ಮಹಾರಾಜನು ದಾರಿಯಲ್ಲಿ ನಡೆದಿದ್ದಾನೆ. ಮಧ್ಯದಲ್ಲಿ ಆತನ ಪರಮಗುರು ಅರಿಸ್ಟಾಟಲ್ ಭೇಟಿಯಾದ. ತಕ್ಷಣವೇ ಅಜೇಯ ದೊರೆ ಅಲೆಗ್ಸಾಂಡರನು ಮಂಡಿಯೂರಿ, ಗುರುವಿಗೆ ತಲೆಬಾಗಿದ. ಜನರು ಬೆರಗಾದರು! ರಾಜನ ವಂದನೆಯನ್ನು ವಿನಯದಿಂದ ಸ್ವೀಕರಿಸಿದ ಗುರು ಅರಿಸ್ಟಾಟಲ್ ಒಂದು ಶಬ್ದವೂ ಮಾತನಾಡದೆ ಹೊರಟು ಹೋದ.

ಆ ಬಳಿಕ ರಾಜನಿಗೆ ಮಂತ್ರಿ ಕೇಳಿದ, ''ಮಹಾಪ್ರಭು ! ತಾವು ಅಜೇಯವೀರರು, ನಿಮ್ಮ ತಂದೆ ನಿಮಗೆ ಸುಂದರ ದೇಹವನ್ನಿತ್ತ. ಯುದಕಲೆಯನ್ನು ಕಲಿಸಿ ಬೆಳೆಸಿದ. ಸಮಸ್ತ ಐಶ್ವರ್ಯವನ್ನು ಕೊಟ್ಟು ನಿಮ್ಮನ್ನು ಏಕಛತ್ರಾಧಿಪತಿಗಳನ್ನಾಗಿ ಮಾಡಿದ. ಇಂಥ ತಂದೆಗಿಂತಲೂ ಹೆಚ್ಚಿನ ಗೌರವವನ್ನು ಈ ಭಿಕ್ಷುಕವೇಷದ ಬಡಗುರುವಿಗೆ ಕೊಡುವಿರಲ್ಲ, ಏಕೆ?''

ಆಗ ಅಲೆಗ್ಸಾಂಡರ್ ದೊರೆ ನೀಡಿದ ಉತ್ತರವನ್ನು ಸುವರ್ಣಾಕ್ಷರದಲ್ಲಿ ಬರೆದಿಡಬೇಕು.

''ನನ್ನ ತಂದೆ ನನ್ನನ್ನು ಸ್ವರ್ಗದಿಂದ ಈ ಭೂಮಿಗೆ ತಂದ. ಗುರುವು ನನ್ನನ್ನು ಈ ಭೂಮಿಯಿಂದ ಸ್ವರ್ಗದೆತ್ತರಕ್ಕೆ ಏರಿಸಿದ. ನನ್ನ ತಂದೆ ನನಗೆ ನಾಶವಾಗುವ ದೇಹವನ್ನು, ಸಂಪತ್ತನ್ನು ಕೊಟ್ಟ. ನನ್ನ ಗುರುವು ನನಗೆ ಅಮರಸಿರಿಯನ್ನು, ದಿವ್ಯ ಜೀವನವನ್ನು ಕರುಣಿಸಿದ. ಅಂಥ ಮಹಾಗುರುವನ್ನು ನಾನು ಹಾಗೆ ಗೌರವಿಸಿದೆ ಇರಬಹುದೆ?'' ಎಂದ ರಾಜ.

ಅಮೂಲ್ಯವಾದ ಆತ್ಮಜ್ಞಾನದ ರತ್ನವನ್ನು ಧರಿಸಿದವನು ಸದ್ಗುರುವು. ಆದ್ದರಿಂದಲೇ ರಾಜಾಧಿರಾಜನು ಈ ಸದ್ಗುರು ನಾಥನು. ಆನಾರೆಂಬುದನ್ನರಿಯಲು ಇಂಥಾ ವಿದ್ಯಾವಾರಿಧಿಯಾದ ಸದ್ಗುರುವನ್ನರಸಿಕೊಂಡು ಬರುತ್ತಾನೆ ಸಚ್ಛಿಷ್ಯನು.

(ಕೃಪೆ : ನಾನಾರು?)







ಚಿಂತನೆ

# ಸಾವು

- ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ *

ಸಾವು !– ಇದೇನಪ್ಪ ಬೆಳಗ್ಗೆ ಏಳುತ್ತಿದ್ದಂತೆ ಸಾವಿನ ಶಬ್ದ ಎಂದು ದಿಗಿಲಾಗಬಹುದು ನಿಮಗೆ. ಜೀವದ ಬೆನ್ನಿನಲ್ಲೇ ನೇರವಾಗಿ ಸುಳಿದಾಡುತ್ತಿರುವ ಅದನ್ನು ಮರೆಯುವುದು ಹೇಗೆ. ನೀವೇ ಹೇಳಿ? ನಾವೀಗ ಎದ್ದಿದ್ದೇವೆ. ಅಂದರೆ ಇನ್ನೂ ಬದುಕಿದ್ದೇವೆ - ಬಿಸಿ ಬಿಸಿಯಾಗಿ ಉಸಿರಾಡುತ್ತ. ಕೆಲವರು ಸಾವನ್ನು ಜೀವದ ನಿರ್ದಯ ಕಟುಕ ಎಂದುಬಿಡುತ್ತಾರೆ. ಹಲವರು ಇದು ಮುಂದಿನ ಬದುಕಿಗೆ ಬಾಗಿಲು ಎನ್ನುತ್ತಾರೆ. ಸಾವು ಎನ್ನುವುದು ಗೋಡೆಯೋ ಬಾಗಿಲೊ ಎಂಬುದನ್ನು ತಿಳಿಯುವುದಂತೂ ಕಷ್ಟ. ಸತ್ತವರು ಯಾರೂ, ಅವರು ಹೋಗಿ ಸೇರಿದ ಜಾಗದ ಬಗ್ಗೆ ನಮಗೆ ಸುದ್ದಿ ಕೊಟ್ಟಿಲ್ಲ; ಮುಂದೆ ಇಂಥ ಜನ್ಮದಲ್ಲಿ ಇದ್ದೇವೆ ಎಂದೂ ತಿಳಿಸಿಲ್ಲ. ಆದ್ದರಿಂದ ಇದನ್ನು ಮುಂದಿನ ಜನ್ಮಕ್ಕೆ ತೆರೆಯುವ ಬಾಗಿಲು ಎನ್ನಲಾಗುವುದಿಲ್ಲ ಅನ್ನೋಣವೆ?

ಆ ಪಿರಮಿಡ್ಡುಗಳನ್ನು ನೋಡಿ. ಸತ್ತವನ ಜೊತೆಗೆ ಇರಿಸಿರುವ ಅಪಾರವಾದ ಆಹಾರ ಸಾಮಗ್ರಿ, ಪ್ರಯಾಣ ಸಾಧನಗಳು, ಅಷ್ಟವಿಧವಾದ ಐಶ್ವರ್ಯ, ಸತ್ತವನಿಗೆ ಪ್ರಿಯವಾದ ವಸ್ತುಗಳ ರಾಶಿರಾಶಿ-ಇವೆಲ್ಲ ಏನನ್ನು ಸೂಚಿಸುತ್ತವೆ? ಸಾವು ಒಂದು ಕ್ಷಣದ ನಿದ್ದೆ. ಮತ್ತೆ ಆ ಜೀವದ ಬದುಕು ಪ್ರಯಾಣ-ಆರಂಭ ಆಗುತ್ತದೆ ಎಂದೇ ಭಾವಿಸಿದರು. ಅದಕ್ಕಾಗಿ ಅತ್ಯಂತ ಸುರಕ್ಷಿತ ಅನ್ನಬಹುದಾದ ಪಿರಮಿಡ್ಡುಗಳನ್ನು ರಚಿಸಿದರು. ಅವುಗಳ ರಕ್ಷಣೆಗೆ 'ಮಮ್ಮಿ'ಗಳನ್ನೂ ಕಾವಲಿರಿಸಿದರು. ಆದರೆ ಸಾವು ಮಾತ್ರ ಸಾವಾಗಿಯೇ ತನ್ನ ವಿಜಯದ ಬಾವುಟ ಹಾರಿಸಿಯೇಬಿಟ್ಟಿತು.

ಒಂದು ಪಕ್ಷ ಸಾವೇ ಇಲ್ಲವಾಗಿದ್ದರೆ ಎಂದು ಯೋಚಿಸಿ ನೋಡಿ. ಎಷ್ಟೊಂದು ಹೆದರಿಕೆಯಾಗಿ ಬಿಡುತ್ತದೆ ಗೊತ್ತಾ? ಹಸಿವು ರೋಗ ದ್ವೇಷ ಪ್ರೀತಿಗಳ ಅನಂತ ಸಮಸ್ಯೆಗಳನ್ನು ಹುಟ್ಟುಹಾಕುತ್ತಿರುವ ಈಗಿರುವ ಜನಸಂಖ್ಯೆಯ ಜೊತೆಗೆ, ಆದಿಮಾನವನಿಂದ ಹಿಡಿದು ಆ ದೈತ್ಯರೂಪದ ಪ್ರಾಣಿಗಳು, ಅವುಗಳ ವಿಚಾರ ಬಿಡಿ– ಎಲ್ಲ ಮನುಷ್ಯರೂ ಬದುಕಿಯೇ ಉಳಿದುಬಿಟ್ಟಿದ್ದರೆ? ಬದುಕುವ ಅವಕಾಶ ಎನ್ನುವ ಮಾತಿರಲಿ, ನಿಲ್ಲುವುದಕ್ಕಾದರೂ ಎಡೆಯಿರುತ್ತಿತ್ತೇನು? ಅದು ಬೇಡ, ಆ ಕಾಲದ ಸೈತಾನ ಹಾವಿನ ರೂಪದಲ್ಲಿ ಬಂದು ಈವಳ ಮೂಲಕ ಆದಮನನ್ನು ಪ್ರಚೋದನೆಗೆ ಗುರಿ ಮಾಡಿದವರು. ಸಾಕ್ರಟೀಸನಿಗೆ ವಿಷ ಕೊಟ್ಟವರು. ಕ್ರಿಸ್ತನನ್ನು ಶಿಲುಬೆಗೇರಿಸಿದ ಫರಿಸಾಯರು. ಇಡೀ ರೋಮ್ ನಗರಕ್ಕೆ ಬೆಂಕಿ ಬಿದ್ದು ಧಗಧಗ ಉರಿಯುತ್ತಿರುವಾಗ ಪಿಟೀಲು ನುಡಿಸಿ ಹಿಗ್ಗಿದ ನೀರೋ. ತನ್ನ ಪಥವೇ ಶ್ರೇಷ್ಠವೆಂಬ ಭ್ರಮೆಗೆ ಸಿಕ್ಕಿ ಮಾನವ ಜನಾಂಗವನ್ನೇ ಗುಲಾಮವಾಗಿ ಮಾಡಿಕೊಳ್ಳಲು ಹೊರಟ ಹಿಟ್ಲರ್. ಅದಕ್ಕೆ ಬೆಂಬಲವಾದ ಮುಸ್ಸೊಲಿನಿ – ಇಂಥವರೆಲ್ಲ ಒಟ್ಟಾಗಿಯೇ ಇದ್ದುಬಿಟ್ಟಿದ್ದರೆ ಎಂಬ ಯೋಚನೆ ಮೂಡುತ್ತಲೆ ಗೊಂದಲ-ದಿಗಲಾಗುತ್ತದೆ. ಇಲ್ಲಿ ಹೇಳಿರುವ ಜನ ಕೆಲವರು ಪ್ರಪಂಚದ ಇತಿಹಾಸದಲ್ಲಿ ಈವರೆಗೆ ಆಗಿಹೋದ ಮೀರ್‌ಸಾದಕರು, ದುಷ್ಟರು, ಭ್ರಷ್ಟರು, ಗರ್ವಿಷ್ಠರು. ಇವರೆಲ್ಲ ಕೈಕೈ ಸೇರಿಸಿ ಬಿಟ್ಟಿದ್ದರೆ ! ಈವರೆಗೆ ಬಂದಿರುವ ಮಹಾನುಭಾವರನ್ನು ನೆನಪಿನಲ್ಲಿಟ್ಟುಕೊಂಡೇ ಈ ಮಾತನ್ನಾಡೋಣ– ಏನಾಗುತ್ತಿತ್ತು? ನೀವೇ ಯೋಚಿಸಿ.

ಒಬ್ಬ ಹಿಟ್ಲರಿನಿಂದಾಗಿಯೆ ಪ್ರಪಂಚದ ಇಡೀ ಮಾನವ ಜನಾಂಗ ತರತರ ತತ್ತರಿಸಿ ಹೋಗಿತ್ತು. ತುಟಿಕಚ್ಚಿ ಅವನ ಸೋಲಿಗಾಗಿ ಹಾತೊರೆಯುತ್ತ ಇತ್ತು. ಇನ್ನು ಸಾವೇ ಇಲ್ಲದೆ ಇವರೆಲ್ಲ ಬದುಕಿಯೇ ಉಳಿದಿದ್ದರೆ, ಹಾಗೆಯೇ ಒಟ್ಟಾಗಿ ಬಿಟ್ಟಿದ್ದರೆ ಎಂಬ ಯೋಚನೆ ಕೂಡ ಕ್ಷಣಮಾತ್ರದಲ್ಲಿ ಇಡೀ ಭೂಮಂಡಲವನ್ನು ಭಯಪ್ರಾಂತವಾಗಿ ಮಾಡಿಬಿಡುತ್ತದೆ. ಈ ದಿಕ್ಕಿನಲ್ಲಿ ನೋಡಿದಾಗ ಸಾವಿನ ಬಗ್ಗೆ ಗಂಭೀರವಾಗಿ ಯೋಚನೆ ಮಾಡಬೇಕೆನಿಸುತ್ತದೆ. ಸಾವು ಕೇವಲ ಹೆದರಿಕೆಯ ಇಲ್ಲವೆ ಜೀವ ಇಲ್ಲವಾಗುವ ಭಯಾನಕ ಸ್ಥಿತಿ ಎಂಬುದಕ್ಕಿಂತ ಇನ್ನೂ ಹೆಚ್ಚು ಗಂಭೀರವಾದ ವಿಷಯ ಅನ್ನಿಸುತ್ತದೆ. ಅದಕ್ಕಾಗಿಯೇ ಇರಬೇಕು Wil Durant ಹೇಳಿದ್ದು :

The fear of death is the beginning of all philosophy and the cause of religion ಎಂದು.

* ನಂ. ೨೦೩, 'ಲಲಿತ ಕೃಪ', ೭ನೇ 'ಎ' ಮುಖ್ಯರಸ್ತೆ, ವಿಜಯನಗರ, ಬೆಂಗಳೂರು-೫೬೦ ೧೦೪







ಸಾಂದರ್ಭಿಕ

## ಬಸವ ತತ್ತ್ವ ಆರಾಧಕ, ಜೋಳಿಗೆಯ ಸಂತ ಇಳಕಲ್ ಮಹಾಂತ ಮಠದ

# ಪೂಜ್ಯ ಡಾ ಶ್ರೀ ಶ್ರೀ ಮಹಾಂತ ಶಿವಯೋಗಿಗಳು

- ಎಚ್.ಎಸ್. ಸಿದ್ಧಗಂಗಪ್ಪ *



ಕರ್ನಾಟಕದಲ್ಲಿ ವೀರಶೈವ-ಲಿಂಗಾಯತ ಮಠಗಳು ಶೈಕ್ಷಣಿಕ, ಧಾರ್ಮಿಕ, ಸಾಂಸ್ಕೃತಿಕ ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲಿ ತೊಡಗಿಸಿಕೊಂಡು ಸಮಾಜದ ಮುಖ್ಯವಾಹಿನಿಯಲ್ಲಿ ಅಮೂಲ್ಯ ಸೇವೆ ಸಲ್ಲಿಸುವುದರ ಮೂಲಕ ಸಮಾಜದ ಸರ್ವಾಂಗೀಣ ಅಭಿವೃದ್ಧಿಯಲ್ಲಿ ಮಹತ್ವದ ಕೊಡುಗೆಯನ್ನು ನೀಡಿವೆ, ನೀಡುತ್ತಾ ಬರುತ್ತಿವೆ. ಈ ನಿಟ್ಟಿನಲ್ಲಿ ಚಿತ್ತರಗಿ ಶ್ರೀ ವಿಜಯ ಮಹಾಂತೇಶ ಮಹಾಸಂಸ್ಥಾನ ಇಳಕಲ್ಲ ಮಠದ ಮಠಾಧ್ಯಕ್ಷರಾಗಿದ್ದ ಡಾ. ಶ್ರೀ ಶ್ರೀ ಮಹಾಂತ ಶಿವಯೋಗಿಗಳು ವಿಭಿನ್ನವಾದ ರೀತಿಯಲ್ಲಿ ಸೇವೆ ಮಾಡುವುದರ ಮೂಲಕ ರಾಷ್ಟ್ರ ಹಾಗೂ ವಿದೇಶ ಗಮನ ಸೆಳೆಯುವಂತೆ ಮಾಡಿದ ಪವಾಡ ಪುರುಷರು.

ಪರಮಪೂಜ್ಯ ಡಾ. ಶ್ರೀ ಶ್ರೀ ಮಹಾಂತ ಶಿವಯೋಗಿಗಳು ಸಮಾಜದ ಒಳಿತಿಗಾಗಿ ತಮ್ಮದೇ ಆದ ವಿನೂತನ ಕಾರ್ಯಕ್ರಮವನ್ನು ಹಮ್ಮಿಕೊಂಡು, ವ್ಯಸನಮುಕ್ತ ವ್ಯಕ್ತಿಗಳನ್ನಾಗಿ ಮಾಡುವುದರ ಮೂಲಕ ಸಂಕಷ್ಟಕ್ಕೆ ತುತ್ತಾಗಿ ನರಕಯಾತನೆ ಅನುಭವಿಸುತ್ತಿದ್ದ ಲಕ್ಷಾಂತರ ಕುಟುಂಬಗಳಲ್ಲಿ ಹೊಸಬೆಳಕು ಮೂಡುವಂತೆ ಮಾಡುವಲ್ಲಿ ತಮ್ಮ ಬದುಕನ್ನೇ ಮೀಸಲಾಗಿಟ್ಟಿದ್ದರು.

ಆರಂಭದಲ್ಲಿ ಪೂಜ್ಯರ ಪ್ರಯತ್ನಕ್ಕೆ ಹಿನ್ನಡೆಯಾದರೂ ಜನರಲ್ಲಿ ಅರಿವನ್ನು ಮೂಡಿಸಿ ಯಶಸ್ವಿಯಾದುದು ಇತಿಹಾಸ.

**ಮಠದ ಇತಿಹಾಸ :** ಚಿತ್ತರಗಿ ವಿಜಯ ಮಹಾಂತೇಶ ಮಠಕ್ಕೆ ತನ್ನದೇ ಆದ ಸುದೀರ್ಘ ಇತಿಹಾಸವಿದೆ, ಭವ್ಯ ಪರಂಪರೆಯಿದೆ, ಹನ್ನೆರಡನೆಯ ಶತಮಾನದಲ್ಲಿ ವೈರಾಗ್ಯಮೂರ್ತಿ, ಅನುಭಾವದ ಉತ್ತುಂಗಶಿಖರ ಅಲ್ಲಮಪ್ರಭು ಕಲ್ಯಾಣಕ್ಕೆ ಹೋಗುವ ಸಂದರ್ಭದಲ್ಲಿ ಚಿತ್ತರಿಗಿಯಲ್ಲಿ ವಾಸ್ತವ್ಯ ಮಾಡಿದ್ದರಂತೆ. ಈ ಸಂದರ್ಭದಲ್ಲಿ ಅವರು ಜನರಿಗೆ ಧರ್ಮೋಪದೇಶ ಮಾಡಿ ಕಲ್ಯಾಣಕ್ಕೆ ಪ್ರಯಾಣ ಮಾಡುವ ಮುನ್ನ ಶ್ರೀ ವಿಜಯ ಮಹಾಂತೇಶ ಸ್ವಾಮಿಗಳನ್ನು ಮಠಕ್ಕೆ ನೇಮಿಸಿ ಪ್ರಯಾಣ ಮಾಡುತ್ತಾರೆಂದು ವಿಜಯ ಮಹಾಂತೇಶ ಲೀಲಾಮೃತ ಪುರಾಣದಲ್ಲಿ ಪ್ರಸ್ತಾಪಿಸಲಾಗಿದೆ.

ಆದರೆ ವಿಜಯ ಮಹಾಂತೇಶ ಲೀಲೆಯ ನಿರಂಜನ ವಂಶಾವಳಿಯಲ್ಲಿ ತೋಂಟದ ಸಿದ್ಧಲಿಂಗೇಶ್ವರರು ಚಿತ್ತರಗಿಯಲ್ಲಿ ಮೊದಲು ಸ್ಥಾಪನೆಗೊಂಡಿದ್ದ ಮಠವನ್ನು ಜೀರ್ಣೋದ್ಧಾರ ಮಾಡಿ ಈ ಮಠಕ್ಕೆ ತಮ್ಮ ಶಿಷ್ಯರಲ್ಲಿ ಒಬ್ಬರಾಗಿದ್ದ ಶ್ರೀ ವಿಜಯ ಮಹಾಂತೇಶ ಎಂಬುವರಿಗೆ ನಿರಂಜನ ಪಟ್ಟಾಧಿಕಾರವನ್ನು

* ೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ೮ನೇ ಬ್ಲಾಕ್, ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು-೯೧ ಮೊ: ೯೮೪೫೫ ೬೫೮೭೧

ನೀಡಿದ್ದರೆಂಬುದನ್ನು ಉಲ್ಲೇಖಿಸಲಾಗಿದೆ. ಈ ಎರಡೂ ಉಲ್ಲೇಖಗಳನ್ನು ಅವಲೋಕಿಸಿದಾಗ ೧೨ನೇ ಶತಮಾನದಲ್ಲಿ ಮಠ ಪ್ರಾರಂಭವಾಗಿದ್ದರೂ, ೧೫ನೇ ಶತಮಾನದಿಂದ ಕಾರ್ಯಚಟುವಟಿಕೆಗಳನ್ನು ನಡೆಸುತ್ತಾ ಬಂದಿರುವುದು ವ್ಯಕ್ತವಾಗುತ್ತದೆ. ಈವರೆಗೆ ಈ ಗುರು ಪರಂಪರೆಯಲ್ಲಿ ೨೦ ಜನ ಸ್ವಾಮಿಗಳವರ ಹೆಸರುಗಳು ತಿಳಿದುಬರುತ್ತದೆ. ಪೂಜ್ಯ ಡಾ. ಶ್ರೀ ಶ್ರೀ ಮಹಾಂತ ಶಿವಯೋಗಿಗಳು ೧೯ನೇಯವರು.

**ಬಾಲ್ಯ-ಶಿಕ್ಷಣ :** ಪೂಜ್ಯ ಶ್ರೀಗಳು ಜಮಖಂಡಿ ತಾಲ್ಲೂಕಿನ ಹಿಪ್ಪರಗಿ ಗ್ರಾಮದ ಶರಣ ಶ್ರೀ ವಿರೂಪಾಕ್ಷಯ್ಯ ಮತ್ತು ಶರಣೆ ಶ್ರೀಮತಿ ನೀಲಮ್ಮ ಅವರ ಸುಪುತ್ರರಾಗಿ ಆಗಸ್ಟ್ ೧, ೧೯೩೨ ರಲ್ಲಿ ಜನಿಸಿದರು. ಅವರದು ಸುಸಂಸ್ಕೃತ ಕುಟುಂಬ. ಅತಿಥಿ ಸತ್ಕಾರಕ್ಕೆ ತೆರೆದ ಮನಸ್ಸು. ಉತ್ತಮ ಪರಿಸರದಲ್ಲಿ ಬೆಳೆದ ಬಾಲಕ ಮಹಾಂತಯ್ಯ ಹುಟ್ಟಿದೂರಿನಲ್ಲಿ ಪ್ರಾಥಮಿಕ ಶಿಕ್ಷಣವನ್ನು ಮುಗಿಸಿ ವೀರಶೈವ ಧರ್ಮದ ಬಗ್ಗೆ ಆಸ್ತಕಿ, ಒಲವನ್ನು ಬೆಳೆಸಿಕೊಂಡು ಸವದಿಯ ಶ್ರೀ ಸಂಗನ ಬಸವ ಸ್ವಾಮಿಗಳಿಂದ ಗುರುದೀಕ್ಷೆಯನ್ನು ಪಡೆದು, ಸಮಾಜ ಸೇವೆಗೆ ತಮ್ಮ ಬದುಕನ್ನು ಮೀಸಲಿಟ್ಟು ಲೌಕಿಕ ಬಂಧನದಿಂದ ಮುಕ್ತರಾದರು. ತಮ್ಮ ಹತ್ತನೇ ವಯಸ್ಸಿನಲ್ಲಿ ಶಿವದೀಕ್ಷೆಯನ್ನು ಪಡೆದು ಮಠವೊಂದರ ವಟುವಾಗಲು ಅಗತ್ಯವಾದ ಸಂಸ್ಕೃತ, ಭಾರತೀಯತತ್ತ್ವಶಾಸ್ತ್ರ, ವೇದಾಧ್ಯಯನ ಮಾಡಿದರು. ನಂತರ ಶಿವಯೋಗ ಮಂದಿರದಲ್ಲಿ ಪ್ರವೇಶ ಪಡೆದು, ಆಧ್ಯಾತ್ಮಿಕ ಶಿಕ್ಷಣ ಪಡೆದರು. ಶ್ರೀ ಜಿ.ಎಂ. ಉಮಾಪತಿ ಶಾಸ್ತ್ರಿಗಳು, ಶ್ರೀ ಪಗಡದಿನ್ನಿ ಬಸವಾಜ ಶಾಸ್ತ್ರಿಗಳು ಹಾಗೂ ಶ್ರೀ ವೀರಭದ್ರ ಸ್ವಾಮಿಗಳವರ ಒತ್ತಾಸೆಯಿಂದ ಅಪಾರ ಪಾಂಡಿತ್ಯವನ್ನು ತಮ್ಮದಾಗಿಸಿಕೊಂಡರು. ಶಿವಯೋಗ ಮಂದಿರದಿಂದ ಕಾಶಿಗೆ ತೆರಳಿ ಹೆಚ್ಚಿನ ಅಧ್ಯಯನ ನಡೆಸಿ ಜ್ಞಾನದ ಗಣಿಯೆ ಆದರು. ಪೂಜ್ಯರು ವೀರಶೈವ ಲಿಂಗಾಯತ ಧರ್ಮವನ್ನು ವೈಚಾರಿಕ ದೃಷ್ಟಿಕೋನದಿಂದ ಬೆಳೆಸಬೇಕೆಂಬ ಆಶಯವನ್ನೂ ಹೊತ್ತು ಕಾಶಿಯಿಂದ ಹಿಂದುರಿಗಿದರು. ಮುಧೋಳ ನವಲಗುಂದ ಹಾಗೂ ಸವದಿ ಮಠದ ಸ್ವಾಮೀಜಿಯಾಗಿ ನೇಮಕಗೊಂಡರು. ಸ್ಪಷ್ಟನುಡಿ, ಅಪಾರ ಪಾಂಡಿತ್ಯ ಹಾಗೂ ಸಂಗೀತ ಜ್ಞಾನದಿಂದಾಗಿ ಉತ್ತಮ ವಾಗ್ಮಿ, ಪ್ರವಚನಕಾರರು ಎಂಬ ಖ್ಯಾತಿಗೆ ಭಾಜನರಾದರು.

**ಶ್ರೀ ವಿಜಯ ಮಹಾಂತೇಶ ಮಠದ ಉತ್ತರಾಧಿಕಾರಿಯಾಗಿ :**

೧೯೭೦ರ ಮೇ ೭ ರಂದು ಶ್ರೀ ವಿಜಯ ಮಹಾಂತೇಶ ಮಠದ ಉತ್ತರಾಧಿಕಾರಿಯಾಗಿ ಶ್ರೀಮಠದ ಪಟ್ಟಾಧಿಕಾರವನ್ನು ವಹಿಸಿಕೊಂಡರು. ಶ್ರೀಮಠದ ೧೮ನೇ ಪೀಠಾಧಿಕಾರಿಯಾಗಿದ್ದ ಮಹಾತಪಸ್ವಿ ಲಿಂ. ಶ್ರೀ ವಿಜಯ ಮಹಾಂತ ಶಿವಯೋಗಿಗಳು ಮಾಡಿದ ವಚನ ಸಾಹಿತ್ಯದ ಸಂಪಾದನೆ, ಪ್ರಸಾರ ಕೆಲಸ ಬಸವ ತತ್ತ್ವದತ್ತ ಮುಖಮಾಡಲು ಪ್ರೇರಣೆ ನೀಡಿತು.

**ಬಸವ ತತ್ತ್ವ ಪ್ರಚಾರ-ಪ್ರಗತಿಪರ ಚಿಂತನೆ :**

ಬಸವಣ್ಣನವರ ಆದರ್ಶ, ಜೀವನ ಮೌಲ್ಯಗಳನ್ನು ಅರ್ಥಮಾಡಿಕೊಂಡಿದ್ದ ಪೂಜ್ಯರು ಬಸವ ತತ್ತ್ವವನ್ನು ಸಮಾಜದಲ್ಲಿ ಸಾಕಾರಗೊಳಿಸಲು ಮುಂದಾದರು. ದೀನ-ದಲಿತರನ್ನು ಸಮಾಜದ ಮುಖ್ಯವಾಹಿನಿಯಲ್ಲಿ ತರಲು ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡರು. ಪ್ರಖರವಾದ ಚಿಂತನೆ, ಪ್ರವಚನದ ಮೂಲಕ ಜನರಲ್ಲಿ ಅರಿವಿನ ಜ್ಯೋತಿಯನ್ನು ಬೆಳಗಲು ಪ್ರಾಮಾಣಿಕ ಪ್ರಯತ್ನ ಮಾಡಿದರು. ಮೂಢನಂಬಿಕೆ ವಿರುದ್ಧ ಸಮರವನ್ನೇ ಸಾರಿದರು. ಅಜ್ಞಾನ, ಅಂಧಕಾರದ ಮೌಢ್ಯದಲ್ಲಿ ತೊಳಲುತ್ತಿದ್ದ ಸಮಾಜಕ್ಕೆ ಪ್ರವಚನದ ಮೂಲಕ ವಾಸ್ತವ ಬದುಕನ್ನು ಮನವರಿಕೆ ಮಾಡಿಕೊಡಲು ಶ್ರಮಿಸಿದರು. ಇದರ ಫಲವಾಗಿ ಗೌರಿ ಹುಣ್ಣಿಮೆಯ ದಿನ ಮಣ್ಣಿನ ಮೂರ್ತಿಯನ್ನು ಕೂರಿಸಿ ಆರತಿ ಬೆಳಗಿ ಕೃತಜ್ಞತೆಯನ್ನು ಸಲ್ಲಿಸುವ ಬದಲು ಹೆತ್ತ ತಾಯಿಯನ್ನು ಮಣೆಯ ಮೇಲೆ ಕೂರಿಸಿ ಪೂಜಿಸುವ ಸತ್ಸಂಪ್ರದಾಯವನ್ನು ಆಚರಣೆಗೆ ತಂದರು. ನಾಗರ ಪಂಚಮಿಯಂದು ಸಾವಿರಾರು ಲೀಟರ್ ಹಾಲು ಮಣ್ಣು ಪಾಲಾಗುವುದನ್ನು ಕಂಡು, ಈ ಆಚರಣೆಯನ್ನು ತಪ್ಪಿಸಬೇಕೆಂದು ಉಪನ್ಯಾಸದ ಮೂಲಕ ಜನಜಾಗೃತಿ ಮೂಡಿಸಿ, ವೈಚಾರಿಕ ಮನೋಭಾವವನ್ನು ಬೆಳೆಸಿಕೊಳ್ಳಬೇಕೆಂದು ಕರೆ ನೀಡಿ, ಕಂದಾಚಾರಗಳಿಂದ ಗೊಂದಲದ ಗೂಡಾಗಿದ್ದ ಅವರ ಮನಸ್ಸನ್ನು ತಿಳಿಯಾಗುವಂತೆ ಮಾಡಿ, ವ್ಯರ್ಥವಾಗಿ ಮಣ್ಣುಪಾಲಾಗುತ್ತಿದ್ದ ಹಾಲನ್ನು ಕಡುಬಡವರಿಗೆ ಹಾಗೂ ಸಾರ್ವಜನಿಕ ಆಸ್ಪತ್ರೆಗಳಲ್ಲಿರುವ ರೋಗಿಗಳಿಗೆ ಸಾರ್ವಜನಿಕರಿಂದ



ಸಂಗ್ರಹಿಸಿ ಹಾಲನ್ನು ವಿತರಿಸುವ ಮೂಲಕ ನಾಗರ ಪಂಚಮಿ ಹಬ್ಬನ್ನು ವೈಚಾರಿಕತೆಯ ಹಿನ್ನೆಲೆಯಲ್ಲಿ ಆಚರಿಸುವ ಸಂಪ್ರದಾಯವನ್ನು ಅನುಷ್ಠಾನಕ್ಕೆ ತರುವಲ್ಲಿ ಯಶಸ್ವಿಯಾದರು. ಸಂಪ್ರದಾಯವಾದಿಗಳು ಮೊದಮೊದಲು ವಿರೋಧ ವ್ಯಕ್ತಪಡಿಸಿದರೂ, ಪೂಜ್ಯರ ಪ್ರಖರವಾದ ಚಿಂತನೆಯ ಬೆಳಕಿನಲ್ಲಿ ಕಂದಾಚಾರದ ಕಪಿಮುಷ್ಠಿಯಿಂದ ಹೊರಬಂದು ಪೂಜ್ಯರ ಅಭಿಪ್ರಾಯಕ್ಕೆ ಸಹಮತವನ್ನು ವ್ಯಕ್ತಪಡಿಸಿ ಕೈಜೋಡಿಸಿದರು.

ಪರಮಪೂಜ್ಯ ಡಾ. ಶ್ರೀ ಮಹಾಂತ ಶಿವಯೋಗಿಗಳಿಗೆ ಬಸವಣ್ಣನವರು ಆದರ್ಶ ವ್ಯಕ್ತಿ. ಅವರು ಬೋಧಿಸಿ ಆಚರಣೆಗೆ ತಂದ ಜೀವನ ಮೌಲ್ಯಗಳನ್ನು ಆಚರಣೆಗೆ ತಂದು ಸಮಾಜದ ಸರ್ವಾಂಗೀಣ ಅಭಿವೃದ್ಧಿಗೆ ತಮ್ಮನ್ನು ಅರ್ಪಿಸಿಕೊಂಡರು. ಅಸಮಾನತೆ, ಅಸ್ಪೃಶ್ಯತೆ, ಕಂದಾಚಾರ, ಮೂಢನಂಬಿಕೆಗಳ ವಿರುದ್ಧ ಅವಿರತವಾಗಿ ಹೋರಾಟ ನಡೆಸಿದರು. ಜನರಲ್ಲಿ ಕಾಯಕ, ದಾಸೋಹ, ಮಾನವೀಯತೆ, ಹೃದಯ ವೈಶ್ಯಾಲತೆ, ಅಂತಃಕರಣ ಮೊದಲಾದ ಉದಾತ್ತ ಗುಣಗಳ ಬೀಜವನ್ನು ಬಿತ್ತಿದರು. ಬಿತ್ತುವುದಷ್ಟೇ ಅಲ್ಲ, ಹುಲುಸಾದ ಬೆಳೆಬರಲು ಜಾಗ್ರತೆ ವಹಿಸಿದರು. ಬಸವ ಧರ್ಮಕ್ಕೆ ವಿರುದ್ಧವಾದ ಆಚರಣೆಗಳನ್ನು ನಿಲ್ಲಿಸಿದರು. ವಚನ ಕಟ್ಟುಗಳ ರಥೋತ್ಸವ, ವಚನಗಳ ತಾಡೋಲೆಗಳ ಅಡ್ಡಪಲ್ಲಕ್ಕಿ, ಜಾತಿಭೇದ ಇಲ್ಲದೆ ಲಿಂಗದೀಕ್ಷೆ, ಸಹಪಂಕ್ತಿ ಭೋಜನ ವ್ಯವಸ್ಥೆಯನ್ನು ಆಚರಣೆಗೆ ತಂದರು. ವಿವಾಹ, ನಾಮಕರಣ ಮುಂತಾದ ಸಮಾರಂಭಗಳಲ್ಲಿ ಬಳಸುತ್ತಿದ್ದ ಅಕ್ಷತೆಗೆ ಬದಲಾಗಿ ಪುಷ್ಪವೃಷ್ಟಿ ಸುರಿಯುವಂತೆ ಮಾಡಿದರು. ದೇವರು ಕರುಣಿಸಿದ ಆಹಾರ ಹಾಗೂ ಆಹಾರಕ್ಕೆ ಸಂಬಂಧಿಸಿದ ಯಾವುದೇ ವಸ್ತುಗಳು ವ್ಯರ್ಥ ಮಾಡಬಾರದು ಎಂಬ ನಿಲವನ್ನು ತಾಳಿದರು. ಮದುವೆಗಳಲ್ಲಿ ಬಳಸುವಂತೆ ಶ್ಲೋಕಗಳ ಬದಲು ವಚನ ಮಂತ್ರಗಳನ್ನು ಬಳಸುವಂತೆ ಮಾಡಿದರು. ಶ್ರಾವಣಮಾಸದ ಕಾರ್ಯಕ್ರಮದಲ್ಲಿ ಬೆಳಗ್ಗೆ ಸಿದ್ಧಾಂತ ಶಿಖಾಮಣಿ, ಸಂಜೆ ವಚನಗಳನ್ನು ಹೇಳಿಸುವುದರ ಮೂಲಕ ಸಮನ್ವಯತೆಯನ್ನು ಸಾಧಿಸಿದರು.

**ಜೋಳಿಗೆಯ ಮಹಾಸಂತ :**

ಸಮಾಜ ಸುಧಾರಣೆಗೆ ಸದಾಚಿಂತನೆ ಮಾಡುತ್ತಿದ್ದ ಪೂಜ್ಯ ಶ್ರೀಗಳು ಹೊಸ ಹೊಸ ಆಯಾಮಗಳಲ್ಲಿ, ಮಾರ್ಗಗಳಲ್ಲಿ ಪ್ರಾಮಾಣಿಕ ಪ್ರಯತ್ನ ಮಾಡಿದರು. ಈ ಹಿನ್ನೆಲೆಯಲ್ಲಿ ಲಿಂಗೈಕ್ಯ ವಿಜಯ ಮಹಂತ ಶಿವಯೋಗಿಗಳ ೬೩ನೇ ಪುಣ್ಯತಿಥಿ ಸಂದರ್ಭದಲ್ಲಿ 'ವ್ಯಸನಮುಕ್ತ ವ್ಯಕ್ತಿ' ಹಾಗೂ 'ಆರೋಗ್ಯವಂತ ಸಮಾಜ'ವನ್ನು ನಿರ್ಮಿಸುವುದಕ್ಕೆ ಶ್ರೀ ಮಹಾಂತ ಶ್ರೀಗಳು ನಿರ್ಧಾರ ಮಾಡಿದರು. ಕೇವಲ ಪ್ರವಚನಗಳಿಂದ ಎಲ್ಲವನ್ನು, ಎಲ್ಲರನ್ನು ಪ್ರಭಾವಿಸಲು ಸಾಧ್ಯವಿಲ್ಲ ಎಂಬುದನ್ನು ತಮ್ಮ ಅನುಭವದಿಂದ ಅರ್ಥಮಾಡಿಕೊಂಡ ಶ್ರೀಗಳು ಹೆಗಲಲ್ಲಿ ಜೋಳಿಗೆ ಹಾಕಿಕೊಂಡು ಧನ, ಧಾನ್ಯ, ಕನಕಾದಿಗಳನ್ನು ಬೇಡದೆ 'ನಿಮ್ಮಲ್ಲಿರುವ ದುಶ್ಚಟಗಳನ್ನು ಮುಕ್ತ ಮನಸ್ಸಿನಿಂದ ನನ್ನ ಜೋಳಿಗೆಗೆ ಹಾಕಿ' ಎಂದು ಮನವಿ ಮಾಡಿಕೊಂಡರು. ಪೂಜ್ಯರ ಈ ವಿನೂತನ ಬೇಡಿಕೆಯಿಂದ ಜನ ದಿಗ್ಭ್ರಮೆಗೊಳಗಾದರು. ಏನು ಪ್ರತಿಕ್ರಿಯಿಸಬೇಕೆಂಬ ಗೊಂದಲಕ್ಕೊಳಗಾದರು. ಅವರ ಮನಸ್ಥಿತಿಯನ್ನು ಅರ್ಥಮಾಡಿಕೊಂಡ ಪೂಜ್ಯ ಶ್ರೀಗಳು ಸಮಾಧಾನದಿಂದ ದುಶ್ಚಟಗಳಿಂದ ವ್ಯಕ್ತಿ ಹಾಗೂ ಅವರ ಆಶ್ರಿತ ಕುಟುಂಬಗಳ ಮೇಲೆ ಆಗುವ ದುಷ್ಪರಿಣಾಮಗಳನ್ನು ಅರ್ಥವಾಗುವಂತೆ ಮನವರಿಕೆ ಮಾಡಿಕೊಟ್ಟರು. ಶ್ರೀಗಳವರ ಮಾತಿಗೆ ಕುಟುಂಬದವರು ಸಹಮತವನ್ನು ವ್ಯಕ್ತಪಡಿಸಿ ದುಶ್ಚಟಗಳನ್ನು ಬಿಡುವಂತೆ ಒತ್ತಡವನ್ನು ಹೇರಿದರು. ನೆರೆಹೊರೆಯವರು ಬೆಂಬಲ ನೀಡಿದರು. ತತ್ಪರಿಣಾಮವಾಗಿ ಮಹಾಂತರ ಜೋಳಿಗೆಗೆ ಮದ್ಯದ ಬಾಟಲಿಗಳು, ಬೀಡಿ, ಸಿಗರೇಟ್, ತಂಬಾಕು ಪೊಟ್ಟಣಗಳು ಹಾಗೂ ಇಸ್ಪೀಟ್ ಎಲೆಗಳು ರಾಶಿ ರಾಶಿಯಾಗಿ ಬಿದ್ದವು. ಇವೆಲ್ಲವನ್ನು ಸಾರ್ವಜನಿಕವಾಗಿ ಸುಟ್ಟು ಹಾಕಿ, ಮತ್ತೆ ಚಟದತ್ತ ವಾಲದಂತೆ ಭಾಷೆ ತೆಗೆದುಕೊಂಡು, ಕುಟುಂಬದವರೊಡನೆ ನೆಮ್ಮದಿ, ಸಂತೋಷದಿಂದ ಜೀವನ ನಡೆಸುವಂತೆ ತಿಳುವಳಿಕೆ ನೀಡಿ, ಆಶೀರ್ವದಿಸಿ ಮುಂದಿನ ಊರಿಗೆ ಪ್ರಯಾಣ ಬೆಳೆಸುವುದರ ಮೂಲಕ ಸಾಮಾಜಿಕ ಕ್ರಾಂತಿಯನ್ನೇ ಮಾಡಿದರು. ಇದರಿಂದ ಸಾವಿರಾರು ಕುಟುಂಬಗಳಲ್ಲಿ ನವಚೈತನ್ಯ ಮೂಡಿ, ಸಂತೋಷದಿಂದ ಜೀವನ ನಡೆಸಲು ಸಾಧ್ಯವಾಯಿತು. ಪೂಜ್ಯ ಶ್ರೀಗಳ ಜೋಳಿಗೆ ಕರ್ನಾಟಕ ಮಾತ್ರವಲ್ಲದೆ ಮಹಾರಾಷ್ಟ್ರ, ಆಂಧ್ರ ಪ್ರದೇಶ, ತಮಿಳು ನಾಡು, ಕೇರಳ, ಉತ್ತರ ಪ್ರದೇಶ, ದೆಹಲಿ ಮುಂತಾದ ಕಡೆಗಳಲ್ಲಿ ಹೋಗಿ ಪ್ರಚಾರ ಮಾಡಿ ಮನಪರಿವರ್ತನೆ ಮಾಡಿ ವ್ಯಸನಗಳ ಕುಟುಂಬಗಳಿಗೆ ಬೆಳಕಾದರು. ಈ ಜೋಳಿಗೆ ವಿದೇಶಗಳಿಗೂ ಹೋಗಿ ಬಂದಿದೆ. ಒಂದು ಸಮೀಕ್ಷೆ ಪ್ರಕಾರ ೪ ಲಕ್ಷಕ್ಕೂ ಹೆಚ್ಚು ಜನ ತಮ್ಮಲ್ಲಿ ಮನೆಮಾಡಿಕೊಂಡಿದ್ದ ದುಶ್ಚಟಗಳನ್ನು ಜೋಳಿಗೆಗೆ ಹಾಕಿ

ಹೊಸ ಜೀವನವನ್ನು ಪ್ರಾರಂಭಿಸಿದ್ದಾರೆ. ಇದರಿಂದ ಮನ ಮನೆಗಳಲ್ಲಿ ಬೆಳಕು ಮೂಡಿದೆ, ಆ ಬೆಳಕಿನಲ್ಲಿ ತಮ್ಮ ಭವಿಷ್ಯವನ್ನು ರೂಪಿಸಿಕೊಂಡಿದ್ದಾರೆ.

**ಬಸವ ತತ್ತ್ವ ಪ್ರಚಾರ :**

ಸದಾ ಕ್ರಿಯಾಶೀಲರಾಗಿದ್ದ ಪೂಜ್ಯ ಶ್ರೀಗಳು ಮಠ ಹಾಗೂ ಸಮಾಜದ ಅಭಿವೃದ್ಧಿಗೆ ಪೂರಕವಾದ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಹಂತ ಹಂತವಾಗಿ ಅನುಷ್ಠಾನಗೊಳಿಸಿದರು. ಬಸವ ತತ್ತ್ವ ಪ್ರಚಾರ, ಶಿವಾನುಭವ ಶಿಬಿರಗಳು, ವಚನ ಪಾಠಶಾಲೆ, ಮಾಸಿಕ ಶಿವಾನುಭವ ಕಾರ್ಯಕ್ರಮ, ಶ್ರೀಮಠದ ಗದ್ದುಗೆಗಳ ಮೇಲೆ ವಚನ ಗ್ರಂಥಗಳ ಸ್ಥಾಪನೆ. ಬಸವಣ್ಣನವರ ವಚನಗಳ ಪಠಣದಿಂದಲೇ ಪೂಜೆ, ಜಾತ್ರಾ ಮಹೋತ್ಸವಗಳನ್ನು ಶರಣ ಸಂಸ್ಕೃತಿ ಮಹೋತ್ಸವಗಳಾದಿ ಆಚರಣೆ, ಬಸವ ತತ್ತ್ವ ಪ್ರಚಾರ ಮಾಡಲು ಬಸವ ಕೇಂದ್ರಗಳ ಸ್ಥಾಪನೆ, ಮನೆ ಮನೆಗಳಲ್ಲಿ ಮಹಾಮನೆ ಕಾರ್ಯಕ್ರಮ. ಗುರು ಪ್ರವೇಶ ಸಮಾರಂಭ, ಜಂಗಮ ದಾಸೋಹ ನಿಧಿ ಸ್ಥಾಪನೆ ಯೋಜನೆ, ಕಾಯಕ ಸಂಜೀವಿನಿ ಸಂಸ್ಥೆ, ಬಸವ ಬೆಳಗು ಪತ್ರಿಕೆ ಪ್ರಾರಂಭ, ಉಚಿತ ಲಿಂಗಧಾರಣೆ ಯೋಜನೆ, ಬಸವ ಸಂದೇಶ ಯಾತ್ರೆ, ಬಸವ ತತ್ತ್ವ ಆಧಾರಿತ ಕಲ್ಯಾಣ ಮಹೋತ್ಸವ, ಇವೇ ಮೊದಲಾದ ಅರ್ಥಪೂರ್ಣ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಯಶಸ್ವಿಯಾಗಿ ಅನುಷ್ಠಾನಗೊಳಿಸುವುದರ ಮೂಲಕ ಆರೋಗ್ಯವಂತ ಸಮಾಜ ನಿರ್ಮಾಣಕ್ಕಾಗಿ ಮೌಲಿಕ ಕೊಡುಗೆಯನ್ನು ನೀಡಿದ್ದಾರೆ.

**ಶೋಷಿತ ವರ್ಗದವರಿಗೆ ಗುರು ಸ್ಥಾನ :**

ನುಡಿದು ನಡೆದಂತೆ ಸಮಾಜದಲ್ಲಿರುವವೆಲ್ಲರೂ ಒಂದೇ ಎಂಬ ಹೃದಯ ವೈಶ್ಯಾಲತೆಯಿಂದ, ದಲಿತರಿಗೆ ದನಿಯಾದ ಬಸವಣ್ಣನವರು ಜಾತಿ, ಮತ, ಲಿಂಗ-ಸ್ಥಾನಮಾನ ಭೇದಭಾವ ಮೀರಿ ಆದರ್ಶ ಸಮಾಜ ನಿರ್ಮಾಣಕ್ಕೆ ಪೂರಕವಾದ ವಾತಾವರಣವನ್ನು ನಿರ್ಮಾಣ ಮಾಡಿದರು. ಇದರಿಂದ ಪ್ರೇರೇಪಿತರಾದ ಪೂಜ್ಯ ಇಳಕಲ್ ಶ್ರೀಗಳು ಹಲವಾರು ಆಚರಣೆಗಳನ್ನು ಅನುಷ್ಠಾನಕ್ಕೆ ತಂದರು. ಸಾಮಾಜಿಕ ನ್ಯಾಯಕ್ಕಾಗಿ ಬಸವಾದಿ ಶರಣರು ಹೋರಾಟ ನಡೆಸಿದರು. ಅವರ ಮೌಲಿಕವಾದ ಸಮಾಜಕ್ಕೆ ದಾರಿದೀಪವಾಗುವ ತತ್ತ್ವಗಳನ್ನು ಕುರಿತು ವೇದಿಕೆಯಲ್ಲಿ ಮಾತನಾಡುವ ನಾವು ಆಚರಣೆಗೆ ತರದಿದ್ದರೆ ಸಮಾಜಕ್ಕೆ ತಪ್ಪು ಸಂದೇಶ ಹೋಗುತ್ತದೆ ಎಂದು ಭಾವಿಸಿದ ಶ್ರೀಗಳು ಲಿಂಗಸೂಗೂರು ಶಾಖಾಮಠ ಹಾಗೂ ಕೆ.ಆರ್. ಪೇಟೆ ತಾಲ್ಲೂಕಿನ ಸಿದ್ಧಯ್ಯನ ಕೋಟೆಮಠಕ್ಕೆ ಹಿಂದುಳಿದ ವರ್ಗದ ಸಂಸ್ಕಾರವಂತ ವಟುವನ್ನು ಉತ್ತರಾಧಿಕಾರಿಯನ್ನಾಗಿ ನೇಮಿಸಿ ಶ್ರೀ ಬಸವಲಿಂಗ ಸ್ವಾಮಿಗಳೆಂದು ಅಭಿದಾನ ಮಾಡಿದುದು ಇತಿಹಾಸ. ಶ್ರೀಮಠದ ವ್ಯಾಪ್ತಿಯಲ್ಲಿ ೫೭ ಶಾಖಾಮಠಗಳಿವೆ. ಈ ಎಲ್ಲಾ ಮಠಗಳಿಗೆ ಸಲಹೆ-ಸಹಕಾರ ಮಾರ್ಗದರ್ಶನ ನೀಡಿ ಮಠಗಳು ಸಮಾಜ ಸೇವೆಯಲ್ಲಿ ತೊಡಗಿಸಿಕೊಳ್ಳುವಂತೆ ಮಾಡಿದ್ದರು.

**ಶೈಕ್ಷಣಿಕ ಸೇವೆ :**

ಪೂಜ್ಯ ಶ್ರೀಗಳು ಧಾರ್ಮಿಕ ಕ್ಷೇತ್ರಕ್ಕೆ ಗಮನ ಕೊಟ್ಟಂತೆ ಶೈಕ್ಷಣಿಕ ಕ್ಷೇತ್ರಕ್ಕೂ ಹೆಚ್ಚು ಆದ್ಯತೆ ನೀಡಿದ್ದಾರೆ. ವಿದ್ಯಾರ್ಥಿಗಳಿಗೆ ಶಾಲಾ ಕಾಲೇಜುಗಳನ್ನು ಪ್ರಾರಂಭಿಸುವುದರ ಜೊತೆಗೆ ವಿದ್ಯಾರ್ಥಿಗಳು ಸುಗಮವಾಗಿ ಶಿಕ್ಷಣ ಪಡೆಯಲು ನೆರವಾಗುವ ದೃಷ್ಟಿಯಿಂದ ವಿದ್ಯಾರ್ಥಿ ನಿಲಯ ಹಾಗೂ ಪ್ರಸಾದ ನಿಲಯಗಳನ್ನು ಸ್ಥಾಪಿಸಿ ತನ್ಮೂಲಕ ನಿರಾಂತಕವಾಗಿ ವಿದ್ಯಾಭ್ಯಾಸ ಮಾಡಲು ಅವಕಾಶ ಕಲ್ಪಿಸಿಕೊಟ್ಟಿದ್ದಾರೆ. ತಮ್ಮ ಗುರುಗಳಾದ ಪೂಜ್ಯ ಶ್ರೀ ವಿಜಯ ಮಹಾಂತೇಶ್ವರವರ ಹೆಸರಿನಲ್ಲಿ ಕಲಾ, ವಿಜ್ಞಾನ, ವಾಣಿಜ್ಯ ಕಾಲೇಜುಗಳು, ಮಾಧ್ಯಮಿಕ, ಪ್ರೌಢಶಾಲೆ, ಪಾಲಿಟೆಕ್ನಿಕ್, ಕೈಗಾರಿಕಾ ತರಬೇತಿ, ಔಷಧ ವಿಜ್ಞಾನ ಕಾಲೇಜುಗಳು ಸೇರಿದಂತೆ ಹಲವಾರು ಶಿಕ್ಷಣ ಸಂಸ್ಥೆಗಳನ್ನು ಪ್ರಗತಿ ಪಥದಲ್ಲಿ ಮುನ್ನಡೆಯುವಂತೆ ಮಾಡಿದ್ದರು.

**ಸಾಹಿತ್ಯ ಕ್ಷೇತ್ರ :**

ಜನರು ತಮ್ಮ ಜ್ಞಾನದ ದಿಗಂತವನ್ನು ವಿಸ್ತಾರ ಮಾಡಿಕೊಳ್ಳಲು, ಶರಣ-ಸಾಹಿತ್ಯ ಹಾಗೂ ಆಧ್ಯಾತ್ಮಿಕ ಗ್ರಂಥಗಳನ್ನು ಶ್ರೀ ವಿಜಯ ಮಹಾಂತೇಶ್ವರ ಧರ್ಮಪ್ರಚಾರಕ ಸಂಸ್ಥೆಯನ್ನು ಸ್ಥಾಪಿಸಿ ತನ್ಮೂಲಕ ಪ್ರಕಟಿಸಿ ಸುಲಭ ಬೆಲೆಯಲ್ಲಿ ದೊರೆಯುವಂತೆ ಮಾಡಿದ್ದಾರೆ. ಕೆಲವು ಪ್ರಮುಖ ಗ್ರಂಥಗಳನ್ನು ಹೆಸರಿಸುವುದಾದರೆ ಶ್ರೀ ವಿಜಯ ಮಹಾಂತೇಶ್ವರ ಪುರಾಣ, ಶ್ರೀ ವಿಜಯ ಮಹಾಂತೇಶ್ವರ ಲೀಲಾಮೃತ, ಶ್ರೀ ಬಸವ ಕಾವ್ಯದರ್ಶನಂ, ಮಹಾಪ್ರಸಾದ, ವಚನಕಾರ ಉರಿಲಿಂಗದೇವ, ಶ್ರೀ ವಿಜಯ ಮಹಾಂತೇಶ್ವರ ಲಾವಣಿ, ಚಿತ್ತರಗಿ ಚಿಜ್ಜ್ಯೋತಿ, ವಚನಗಂಗಾ ಲಹರಿ, ವಚನ ಪಿತಾಮಹ, ಮಹಾಂತ ಜೋಳಿಗೆ, ಕನ್ನಡ ಕೈವಲ್ಯ ಸಾಹಿತ್ಯ,



ವಿಭೂತಿ ನಿರ್ಮಾಣದ ವಿಧಾನ, ವೀರಶೈವ ವೈಚಾರಿಕ ವಿವೇಚನೆ, ಕಲ್ಯಾಣ ಕ್ರಾಂತಿ ಹಿಂದು ಮುಂದು. ಶರಣರ ಕುರಿತು ಕನ್ನಡ ಕಾದಂಬರಿಗಳು ಹಾಗೂ ವಚನ ಮುಖದಲ್ಲಿ ಶರಣ ಧರ್ಮ ಮುಂತಾದ ೫೦ಕ್ಕೂ ಹೆಚ್ಚು ಮೌಲಿಕ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಜೊತೆಗೆ ಪ್ರಸಿದ್ಧ ಸಾಹಿತಿಗಳ ಮೌಲಿಕ ಕೃತಿಗಳನ್ನು ಗುರುತಿಸಿ ಲೇಖಕ ವಿದ್ವಾಂಸರಿಗೆ ಗೌರವಧನ ನೀಡಿ ಗೌರವಿಸಿದ್ದಾರೆ.

**ಪ್ರಶಸ್ತಿ-ಗೌರವಗಳು :**

ಪರಮಪೂಜ್ಯ ಡಾ. ಶ್ರೀ ಶ್ರೀ ಮಹಾಂತ ಶಿವಯೋಗಿಗಳು ಸಾಮಾಜಿಕ, ಧಾರ್ಮಿಕ, ಸಾಹಿತ್ಯ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ಸಲ್ಲಿಸಿದ ಅಸಾಧಾರಣ ಸೇವೆಗಾಗಿ ಹಲವಾರು ಪ್ರತಿಷ್ಠಿತ ಸಂಘ ಸಂಸ್ಥೆಗಳು, ಮಠಮಾನ್ಯಗಳು, ಸರ್ಕಾರ ಪ್ರಶಸ್ತಿ ನೀಡಿ ಗೌರವಿಸಿವೆ. ಕರ್ನಾಟಕ ವಿಶ್ವವಿದ್ಯಾಲಯದಿಂದ ಗೌರವ ಡಾಕ್ಟರೇಟ್, ಬಸವಶ್ರೀ, ಪೂಜ್ಯರ ಜನ್ಮದಿನ ಆಗಸ್ಟ್ ೧ ರಂದು ರಾಜ್ಯ ಸರ್ಕಾರ 'ವ್ಯಸನ ಮುಕ್ತ' ದಿನವನ್ನಾಗಿ ಆಚರಿಸಲು ನಿರ್ಧರಿಸಿದ್ದು, ಅವರಿಗೆ ಸಲ್ಲಿಸಿದ ಮಹೋನ್ನತ ಗೌರವವಾಗಿದೆ. ಶ್ರೀಮಠದ ಉತ್ತರಾಧಿಕಾರಿಗಳಾಗಿರುವ ಪೂಜ್ಯ ಶ್ರೀ ಶ್ರೀ ಮಹಾಂತ ಸ್ವಾಮೀಜಿಯವರು ತಮ್ಮ ಗುರುಗಳ ಆದರ್ಶದ ದಾರಿದೀಪದಲ್ಲಿ ಶ್ರೀಮಠವನ್ನು ಮತ್ತಷ್ಟು ಅಭಿವೃದ್ಧಿಪಡಿಸುತ್ತಾರೆಂಬ ಡಾ. ಶ್ರೀ ಶ್ರೀ ಮಹಾಂತ ಶಿವಯೋಗಿಗಳವರು ಹಮ್ಮಿಕೊಂಡ ಎಲ್ಲಾ ಕಾರ್ಯಕ್ರಮಗಳನ್ನು ಮುಂದುವರಿಸಿಕೊಂಡು ಹೋಗುತ್ತಾರೆಂಬ ವಿಶ್ವಾಸ, ಭರವಸೆ ಭಕ್ತರಿಗಿದೆ.

**ಶ್ರೀ ಸಿದ್ಧಗಂಗಾ ಮಠದೊಂದಿಗೆ :**

ಬಸವಾದಿ ಶರಣರ ಆದರ್ಶಗಳನ್ನು ಸಂಪೂರ್ಣವಾಗಿ ಅನುಷ್ಠಾನಗೊಳಿಸಿರುವ ಶ್ರೀ ಸಿದ್ಧಗಂಗಾ ಮಠ ಹಾಗೂ ನಡೆದಾಡುವ ದೇವರು, ಪದ್ಮಭೂಷಣ, ಕರ್ನಾಟಕ ರತ್ನ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರೊಂದಿಗೆ ಅವಿನಾಭಾವ ಸಂಬಂಧವನ್ನಿಟ್ಟುಕೊಂಡಿದ್ದರು. ಪರಮಪೂಜ್ಯರ ಶತಮಾನೋತ್ಸವ ಸಮಾರಂಭವು ಸೇರಿದಂತೆ ಅನೇಕ ಸಮಾರಂಭಗಳಲ್ಲಿ ಭಾಗವಹಿಸಿ ಸಾನ್ನಿಧ್ಯ ವಹಿಸಿ ಪೂಜ್ಯರನ್ನು ಕುರಿತು ನುಡಿ ನಮನವನ್ನು ಸಲ್ಲಿಸಿರುವುದನ್ನು ಈ ಸಂದರ್ಭದಲ್ಲಿ ಸ್ಮರಿಸಬಯಸುತ್ತೇನೆ. ಪೂಜ್ಯ ಇಳಕಲ್ ಶ್ರೀಗಳು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರನ್ನು ಕುರಿತು ಹೃದಯ ತುಂಬಿ ನುಡಿ ನಮನಗಳನ್ನು ಹೀಗೆ ಸಲ್ಲಿಸಿದ್ದರು.

**ಬಸವಜ್ಯೋತಿ ಸ್ವರೂಪರು :**

"ಸಕಲ ಜೀವರಾಶಿಗಳ ಲೇಸು ಬಯಸಿದ, ಮಾನವ ಕುಲದ ಕಲ್ಯಾಣಕ್ಕಾಗಿ ಅರಿವು-ಆಚಾರ-ಅನುಭಾವ ತಳಹದಿಯ ಲಿಂಗಾಯತ ಧರ್ಮವನ್ನು ಸ್ಥಾಪಿಸಿದ ವಿಶ್ವಗುರು ಬಸವಣ್ಣನವರ ೧೨ನೇ ಶತಮಾನದ ಕಾಯಕ, ದಾಸೋಹ, ಪ್ರಸಾದ ತತ್ತ್ವ ಸಿದ್ಧಾಂತ ಸಂಸ್ಕೃತಿ ಪರಂಪರೆಯನ್ನು ೨೧ನೇ ಶತಮಾನದಲ್ಲಿ ಕ್ರಿಯಾಶೀಲವಾಗಿ ನಡೆಸುತ್ತಿರುವ ಪೂಜ್ಯಪಾದರಾದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಬಸವ ಚೇತನ ಸ್ವರೂಪಿಗಳಾಗಿದ್ದಾರೆ. ಪರಮಪೂಜ್ಯ ಮಹಾಶಿವಯೋಗಿಗಳು ಶುದ್ಧ ಪ್ರಸಾದ-ಸಿದ್ಧ ಪ್ರಸಾದ-ಪ್ರಸಿದ್ಧ ಪ್ರಸಾದವನ್ನು ಸಿದ್ಧಗಂಗಾ ಮಠದ ಮೂಲಕ ಎಡೆಮಾಡುತ್ತಾ, ತ್ರಿವಿಧ ದಾಸೋಹ ಮೂರ್ತಿಗಳಾಗಿದ್ದಾರೆ.

ಪೂಜ್ಯ ಶ್ರೀಗಳವರು ವಯೋವೃದ್ಧರೂ, ಜ್ಞಾನವೃದ್ಧರೂ, ಅನುಭಾವವೃದ್ಧರೂ ಆಗಿದ್ದಾರೆ. ಅವರು ತನು, ಮನ, ಭಾವಂಗಳಲ್ಲಿ ಬಸವ ತತ್ತ್ವ ತುಂಬಿ ಪ್ರವಹಿಸುತ್ತದೆ. ಬಸವಗುರು ಅವರಿಗೆ ಮಂತ್ರ ಪುರುಷ, ಬಸವ ಸಂದೇಶ ಅವರ ಬಾಳಿನ ಉಸಿರಾಗಿದೆ.

ಪೂಜ್ಯರ ಬಾಳು ಲಿಂಗಮಯವಾಗಿದೆ. ಪೂಜ್ಯರು ನಡೆ ಲಿಂಗ ನುಡಿಲಿಂಗಗಳಾಗಿದ್ದಾರೆ. ಕೂಡಲ ಸಂಗನ ರಾಜತೇಜದಲ್ಲಿ ಪೂಜ್ಯರು ಲಿಂಗಮೆಚ್ಚಿ ಅಹುದು ಹುದೆನ್ನುವಂತೆ ಅನುಭಾವ ನೀಡುತ್ತಾರೆ. ಪೂಜ್ಯರ ಜೀವನ ಸಾಧನೆಗಳು ನಾಡಿನ ಮಠಾಧಿಪತಿಗಳಿಗೆ ಆದರ್ಶ ಹಾಗೂ ಅನುಕರಣೀಯವಾಗಿದೆ. ಪೂಜ್ಯರು ನಾಡಿನ ಗುರು ಜಗದ್ಗುರುಗಳಾಗಿ ಮಠ, ಪೀಠಾಧಿಪತಿಗಳಿಗೆಲ್ಲ ಬಸವ ಜ್ಯೋತಿ ಸ್ವರೂಪರಾಗಿದ್ದಾರೆ.

ಪೂಜ್ಯರು ಮಹಾತಪಸ್ವಿಗಳು, ಅವರ ತಪಸ್ಸಿನ ಫಲದಿಂದ ಇಷ್ಟೆಲ್ಲಾ ಅದ್ಭುತವಾದ ಕಾರ್ಯಗಳು ಜರುಗುತ್ತಿವೆ. ಪೂಜ್ಯರು ತಮ್ಮ ಕತೃತ್ವ ಶಕ್ತಿಯಿಂದ ಶ್ರೀಮಠವನ್ನು ಮಹಾಮನೆಯನ್ನಾಗಿಸಿದ್ದಾರೆ. ಅವರು ಸರ್ವ ಧರ್ಮ ಸಹಿಷ್ಣುಗಳು. ಮಹಾಮಾನವತಾ ವಾದಿಗಳು. ಬಸವಾದಿ ಶರಣರ ಸಿದ್ಧಾಂತಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಅನುಷ್ಠಾನ ಗೊಳಿಸುತ್ತಿದ್ದಾರೆ. ಅವರು ರಾಷ್ಟ್ರ ಕಂಡ ಮಹಾಸಂತರು."

ಇಳಕಲ್ ಶಿವಯೋಗಿಗಳು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರನ್ನು ಕುರಿತು





ಹೇಳಿದ ಒಂದೊಂದು ನುಡಿಗಳು ಶಿವಘನ ವ್ಯಕ್ತಿತ್ವದ ಮುಡಿಗೆ ಮುಡಿಸಿದ ಸುಂದರ ಪುಷ್ಪಗಳಾಗಿವೆ.

ಲಿಂಗೈಕ್ಯ : ಪರಮಪೂಜ್ಯ ಇಳಕಲ್ ಡಾ. ಶ್ರೀ ಶ್ರೀ ಮಹಾಂತ ಶಿವಯೋಗಿಗಳು ೮೮ ವರ್ಷಗಳು ಶ್ರೀಮಠದ ಪೀಠಾಧಿಪತಿಗಳಾಗಿ ಮಠದ ಸರ್ವಾಂಗೀಣ ಅಭಿವೃದ್ಧಿಗೆ ತಮ್ಮನ್ನು ಅರ್ಪಿಸಿಕೊಂಡು ಅಮೂಲ್ಯ ಸೇವೆ ಸಲ್ಲಿಸಿದ್ದರು. ಬಸವಾದಿ ಶರಣರ ಆದರ್ಶದ ಮುಂಬೆಳಕಿನಲ್ಲಿ ಮಠದ ಕೀರ್ತಿಯನ್ನು ದೇಶ ವಿದೇಶಗಳಲ್ಲಿಯೂ ಪಸರಿಸುವಂತೆ ಮಾಡಿದ್ದಾರೆ. ೮೮ ವಸಂತಗಳ ಬೇವು ಬೆಲ್ಲವನ್ನು ಸ್ಥಿತಪ್ರಜ್ಞರಾಗಿ ಸವಿದು, ಬೆಲ್ಲದ ಸಿಹಿಯನ್ನು ಸಮಾಜಕ್ಕೆ ಅರ್ಪಿಸಿದ್ದಾರೆ. ಪೂಜ್ಯರು ಮೇ. ೧೯ ರಂದು ಲಿಂಗದೊಳಗೊಂದಾದರು. 'ಶರಣರನ್ನು ಮರಣದಲ್ಲಿ ನೋಡು' ಎಂಬ ಸೂಕ್ತಿ ಪೂಜ್ಯರ ಅಂತ್ಯ ಸಂಸ್ಕಾರದಲ್ಲಿ ಲಕ್ಷಾಂತರ ಜನ ಭಕ್ತರು, ಅಭಿಮಾನಿಗಳು ಸೇರಿದುದು ಸಾಕ್ಷಿಯಾಗಿತ್ತು. ಪರಮಪೂಜ್ಯರು ಹಾಕಿಕೊಟ್ಟ ಮೇಲ್ಪಂಕ್ತಿಯನ್ನು ಜೀವನದಲ್ಲಿ ಅಳವಡಿಸಿಕೊಂಡು ಅನುಸರಿಸುವುದೇ ನಾವು ಅವರಿಗೆ ಸಲ್ಲಿಸಬಹುದಾದ ನಿಜಗೌರವ ಹಾಗೂ ಶರಣಾಂಜಲಿ.

## ಶ್ರೀವಾಣಿ

ದೇಶದಲ್ಲಿ ಬಹಳ ಮಂದಿ ಕಷ್ಟ ಅನುಭವಿಸುವಾಗ ಶ್ರೀಮಂತರು ಕಡ್ಡಾಯವಾಗಿ ಸ್ವಯಂ ಪ್ರೇರಿತರಾಗಿ ಮುಂದೆ ಬಂದು ಬಡವರಿಗೆ ಸೇವೆ ಮಾಡುವುದು ಅವರ ಕರ್ತವ್ಯ. ತ್ಯಾಗ, ಸೇವೆ ಎಂದಾಕ್ಷಣವೇ ಸರ್ವಸ್ವವನ್ನೂ ನೀಡಿ ಬಿಕಾರಿಗಳಾಗಿ ಬೀದಿ ಪಾಲಾಗಬೇಕು ಎಂದರ್ಥವಲ್ಲ. ತಾವು ಉಂಡು, ತಿಂದು, ತಮ್ಮ ಕೈಲಾದಷ್ಟನ್ನು ಇತರರಿಗೆ ಬಿಡುಗೈನಿಂದ ನೀಡಿದರೆ ಸಾಕು, ಅದೇ ಸೇವೆ. ಕಾಲ ಬದಲಾವಣೆಯಾಗುತ್ತಿದೆ. ಉತ್ತಮ ಸ್ಥಾನದಲ್ಲಿರುವವರು ಹಳ್ಳಿಗರ, ಬಡವರ, ದೀನ ದಲಿತರ ಉದ್ಧಾರಕ್ಕೆ ಮುಂದೆ ಬರಬೇಕು, ಇಲ್ಲದೆ ಹೋದರೆ ಸಾಮಾನ್ಯ ಜನರ ಹೃದಯ ನೊಂದು ಬೆಂದು ಕ್ರಾಂತಿಯಾದೀತು. ರಕ್ತ ಹರಿದೀತು. ಸ್ವಾರ್ಥ ಮುಂದುವರಿದರೆ ಮಹಾವಿಪತ್ತು ಸಂಭವಿಸೀತು.

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಸದಸ್ಯರಾಗಿರುವುದು ಸಂತೋಷ. ಇದರಿಂದ 'ಸಿದ್ಧಗಂಗಾ' ನಿರಂತರವಾಗಿ ನಿಮ್ಮ ಮನ-ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಕಾಗದ, ಮುದ್ರಣ, ಅಂಚೆ ವೆಚ್ಚ ಇನ್ನಿತರೆ ವೆಚ್ಚಗಳು ದುಬಾರಿಯಾಗಿದ್ದು, ಪತ್ರಿಕೆ ಮುನ್ನಡೆಸಲು ಕಷ್ಟವಾಗುತ್ತದೆ ಎಂಬುದನ್ನು ತಮ್ಮ ಗಮನಕ್ಕೆ ತರುತ್ತಲೇ ಬರುತ್ತಿದ್ದೇವೆ.

ಪ್ರಾರಂಭಕ್ಕೆ ೫೦೦/- ರೂ, ೧೦೦೦/-ರೂ ಆಜೀವ ಸದಸ್ಯರಾಗಲು ಚಂದಾ ಸಂದಾಯ ಮಾಡಿದ್ದಿರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಕೇವಲ ೫೦/- ರೂ, ೧೦೦/- ಮಾತ್ರ, ಇಷ್ಟು ಕನಿಷ್ಠ ಹಣದಿಂದ ಪತ್ರಿಕೆ ಮುದ್ರಣ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಕೊರತೆಯನ್ನು ದಯವಿಟ್ಟು ಅರ್ಥಮಾಡಿಕೊಳ್ಳುವಿರೆಂದು ಭಾವಿಸಿದ್ದೇವೆ.

**ಪ್ರಸ್ತುತ ಆಜೀವ ಚಂದಾ ೨೦೧೮ ವರ್ಷದಿಂದ ೧೫೦೦/- ರೂ ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/- ರೂ ಸಂದಾಯ ಮಾಡಿರುವವರು ಬಾಕಿ ೧೦೦೦/- ರೂ ಸಂದಾಯ ಮಾಡಬೇಕು. ೧೦೦೦/- ರೂ ಸಂದಾಯ ಮಾಡಿರುವವರು ಬಾಕಿ ೫೦೦/- ಸಂದಾಯ ಮಾಡಲು ಕೋರಿದೆ.**

ದಯಮಾಡಿ ತಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತವನ್ನು ಸಿದ್ಧಗಂಗಾ ಮಾಸಪತ್ರಿಕೆ ಹೆಸರಿನಲ್ಲಿ ನಗದು/ಚೆಕ್/ಡಿ.ಡಿ. ಮೂಲಕ ತಪ್ಪದೆ ಪತ್ರಿಕೆ ಆಜೀವ ಸದಸ್ಯತ್ವದ (ಐಭ) ಸಂಖ್ಯೆ ನಮೂದಿಸಿ ದೂರವಾಣಿ/ಮೊಬೈಲ್ ನಂಬರ್‌ನೊಂದಿಗೆ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ ಕೊಡುವುದರ ಮೂಲಕ 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಬೇಕಾಗಿ ಕಳಕಳಿಯಿಂದ ಪ್ರಾರ್ಥಿಸುತ್ತೇವೆ. ವಿಳಾಸ ಬದಲಾವಣೆಯಾಗಿದ್ದರೆ ದಯವಿಟ್ಟು ಬದಲಾದ ವಿಳಾಸ ಹಾಗೂ ತಮ್ಮ ದೂರವಾಣಿ ಸಂಖ್ಯೆಯನ್ನು ತಮ್ಮ (LM) ಸಂಖ್ಯೆಯೊಂದಿಗೆ ಕಾರ್ಡಿನಲ್ಲಿ ಬರೆದು ಕಳುಹಿಸಿಕೊಟ್ಟರೆ ಪತ್ರಿಕೆ ತಮಗೆ ತಲುಪಲು ಅನುಕೂಲವಾಗುತ್ತದೆ. ವಾರ್ಷಿಕ ಚಂದಾದಾರರು ತಮ್ಮ ಸದಸ್ಯತ್ವದ ಅವಧಿ ಮುಗಿದಿದ್ದರೆ ನವೀಕರಿಸಿಕೊಳ್ಳಬೇಕೆಂದು ಕೋರುತ್ತೇವೆ.

ಪ್ರಕಾಶಕರು,
'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ-೫೭೨ ೧೦೪.
ದೂರವಾಣಿ : ೦೮೧೩೧-೨೨೮೩೨೨



## ಶಿವನುಡಿ

ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ೧೧೧ನೇ ಹುಟ್ಟುಹಬ್ಬದ ಮಹಾಮಹೋತ್ಸವ ಸಂದರ್ಭದಲ್ಲಿ

# ಶ್ರೀ ಮ.ನಿ.ಪ್ರ. ಶ್ರೀ ಶ್ರೀ ಮಹಾಂತ ಶಿವಯೋಗಿಗಳವರು, ಚಿತ್ತರಗಿ-ಇಲಕಲ್ಲ

ಇವರು ನೀಡಿದ ಬಸವಾದಿ ಶರಣರ ಶಿವಾನುಭವ

ಮಹಾಮಹಿಮ ಸಂಘನಬಸವಣ್ಣ
ಎನಗೆಯೂ ಗುರು ನಿಮಗೆಯೂ ಗುರು
ಜಗವೆಲ್ಲಕ್ಕೆಯೂ ಗುರು ಕಾಣಾ ಗುಹೇಶ್ವರಾ

ಸಕಲ ಜೀವಾತ್ಮರ ಲೇಸನೇ ಬಯಸಿದ ಲೋಕ ಪೂಜ್ಯರಾದ ವಿಶ್ವಗುರು ಬಸವಣ್ಣನವರನ್ನು ಸ್ಮರಿಸಿ ಕಲ್ಯಾಣದಪ್ಪಗಳವರ ನಿರಂಜನ ಮಹಾ ಬೆಳಗಿನಲ್ಲಿ ಬೆಳಕಾಗಿರುವ ಹಾಗೂ ಎಂಬತ್ತು ಮೂರನೆಯ ಜನ್ಮ ದಿನೋತ್ಸವದ ಮಹಾ ಬೆಳಗಿನಂಗಳದಲ್ಲಿ ಜಂಗಮ ಜ್ಯೋತಿಯಾದ ಪರಮ ಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳ ಜಂಗಮ ಪಾದಾರವಿಂದಗಳಲ್ಲಿ ಶರಣು ಸಮರ್ಪಿಸಿ.

ನಮ್ಮ ನಾಡಿನ ಅರುಹಿನ ಹಿರಿಯ ಚೈತನ್ಯ ಮೂರ್ತಿಗಳಾದ ಜನನಾಯಕ ಸನ್ಮಾನ್ಯ ಶ್ರೀ ವೀರೇಂದ್ರ ಪಾಟೀಲರು ಮುಖ್ಯಮಂತ್ರಿಗಳು ಕರ್ನಾಟಕ ರಾಜ್ಯ ಅವರಲ್ಲಿ ಶರಣು ಸಲ್ಲಿಸಿ "ಶ್ರೀ ಶಿವಕುಮಾರ ಚರಿತಂ" ಗ್ರಂಥ ಬಿಡುಗಡೆಗಾಗಿ ಆಗಮಿಸಿದ ಅರ್ಥ ಸಚಿವರಾದ ಸನ್ಮಾನ್ಯ ಶ್ರೀ ಎಂ.ರಾಜಶೇಖರ ಮೂರ್ತಿಗಳವರೇ, ಮುಖ್ಯ ಅತಿಥಿಗಳಾಗಿ ಆಗಮಿಸಿದ ನೀರಾವರಿ ಮತ್ತು ಲೋಕೋಪಯೋಗಿ ಸಚಿವರಾದ ಸನ್ಮಾನ್ಯ ಶ್ರೀ ಪುಟ್ಟಸ್ವಾಮಿಗೌಡರೇ, ಹಾಗೂ ಪೂಜ್ಯಪಾದರಲ್ಲಿ ಭಕ್ತಿ ಸಮರ್ಪಣಾ ನುಡಿಯಲು ನೀಡಲು ಆಗಮಿಸಿದ ವಿಧಾನ ಪರಿಷತ್ತು ಸದಸ್ಯರಾದ ಸನ್ಮಾನ್ಯ ಶ್ರೀ ಬಿ.ಬಿ. ಶಿವಪ್ಪನವರೇ ಪೂಜ್ಯರ ೮೩ ನೇ ಜನ್ಮ ದಿನೋತ್ಸವ ಸಂದರ್ಭದಲ್ಲಿ ಪಾಲ್ಗೊಳ್ಳಲು ಆಗಮಿಸಿರುವ ಸಮಸ್ತ ಪೂಜ್ಯರೇ, ಶರಣ ತಂದೆ-ತಾಯಿಗಳೇ ತಮ್ಮೆಲ್ಲರಿಗೂ ಶರಣು ಶರಣಾರ್ಥಿಗಳು.

ಪರಮ ಪಾವನ ಶ್ರೀ ಕ್ಷೇತ್ರ ಸಿದ್ಧಗಂಗೆಯ ಜಂಗಮ ಚೈತನ್ಯಲಿಂಗವಾಗಿರುವ, ತ್ರಿವಿಧ ದಾಸೋಹ ಮೂರ್ತಿಗಳೂ, ಬಸವಾದಿ ಪ್ರಮಥರ ಮಹಾಸಂದೇಶಕ್ಕೆ ಪ್ರತ್ಯಕ್ಷ ಪ್ರಯೋಗಶಾಲೆಯಾದವರೂ ನುಡಿ-ಲಿಂಗ-ನಡೆ-ಲಿಂಗವಾಗಿ ವಿಶ್ವವನ್ನು ಮುನ್ನಡೆಯಿಸಬಲ್ಲ ಕರ್ತಾರನ ಪವಿತ್ರ ಜ್ಞಾನ ಪ್ರಸಾದ ದರ್ಶನಾಕಾಂಕ್ಷಿಗಳಾಗಿ ಇಂದು ನಾವಿಲ್ಲಿಗೆ ಬಂದಿದ್ದೇವೆ. ಕಾಶಿ ಶ್ರೀಶೈಲ ಮೊದಲಾದ ಪುಣ್ಯಕ್ಷೇತ್ರ ನಮ್ಮ ಕ್ಷೇತ್ರವಲ್ಲ; ಪರಮಪೂಜ್ಯ ಶಿವಕುಮಾರ ಮಹಾಸ್ವಾಮಿಗಳವರ ಸುಜ್ಞಾನ ಶ್ರೀ ಪಾದವೇ ಸುಕ್ಷೇತ್ರವಾಗಿದೆ ನಮಗೆಲ್ಲ. ಪೂಜ್ಯ ಶಿವಕುಮಾರ ಅಪ್ಪಗಳವರು ತಮ್ಮ ಅರುಹಿನ ಎತ್ತರದಿಂದ, ಅನುಭವದ ಬಿತ್ತರದಿಂದ ಚಲಿಸುತ್ತಿರುವ ದೇವಾಲಯವಾಗಿದ್ದಾರೆ. ದೇಹವೇ ದೇವಾಲಯವಾಗಿರುವಾಗ, ಸತ್ಯಜ್ಞಾನ ಚೈತನ್ಯವೇ ಜಂಗಮ ಲಿಂಗವಾಗಿರುವ ಮತ್ತೆ ಬೇರೆ ಜಡಮೂರ್ತಿಗಳಿಗೆ ಹೋಗುವ ಹಂಗಾದರೂ ನಮಗೇಕೆ?

"ತನುವಿನಲ್ಲಿ ನಿರ್ಮೋಹ, ಮನದಲ್ಲಿ ನಿರಹಂಕಾರ
ಪ್ರಾಣದಲ್ಲಿ ನಿರ್ಭಯ ಚಿತ್ತದಲ್ಲಿ ನಿರಪೇಕ್ಷೆ
ವಿಷಯದಲ್ಲಿ ಉದಾಸೀನ ಭಾವದಲ್ಲಿ ದಿಗಂಬರ
ಜ್ಞಾನದಲ್ಲಿ ಪರಮಾನಂದ ನೆಲೆಗೊಂಡ ಬಳಿಕ
ಸೌರಾಷ್ಟ್ರ ಸೋಮೇಶ್ವರ ಲಿಂಗವು ಬೇರಿಲ್ಲ ಕಾಣಿಭೋ"

ಎಂದು ಶರಣ ಆದಯ್ಯನವರು ಸಾರಿದ್ದು, ಇಂಥ ಪೂಜ್ಯ ಶಿವಕುಮಾರ ಅಪ್ಪಗಳವರ ಅರುಹಿನಿಂದ ಒಪ್ಪಿತವಾಗಿರುವ ದಿವ್ಯ ಜೀವನವನ್ನು ಪ್ರತ್ಯಕ್ಷ ಕಂಡೇ ಅಲ್ಲವೆ? ನಿಜವನರಿದ ನಿಶ್ಚಿಂತರು ಇವರು. ಮರಣವ ಗೆಲಿದ ಮಹಾಂತರು ಇವರು.

ಪರವನೊಳಕೊಂಡ ಪರಿಣಾಮಿ ಇವರು. ನಿರಾಳವನ್ನೊಳ ಕೊಂಡ ಸಹಜಶೀಲರು ಇವರು. ಇಂಥ ಸಹಜ ಶಿವಯೋಗಿಗಳವರನ್ನು ಪಡೆದ ಇಪ್ಪತ್ತನೆಯ ಶತಮಾನದ ಕಾಲ ಭಾಗ್ಯದ ಕಾಲ. ಇವರನ್ನು ಪ್ರತ್ಯಕ್ಷ ಕಾಣುವ ಪುಣ್ಯಪಡೆದ ನಾವು ಭಾಗ್ಯವಂತರು. ಶಿವಚೈತನ್ಯದಲ್ಲಿ ಅಖಂಡವಾದ ನಂಬಿಗೆ ಇರಿಸಿ; ಸಕಲ ಜೀವಾತ್ಮರಿಗೆ ಲೇಸನೇ ಬಯಸುವವನೇ ಮಹಾ ಶರಣ, ವ್ಯಕ್ತಿ ಪರಿವರ್ತನೆ ಹಾಗೂ ವಿಶ್ವ ಪರಿವರ್ತನೆಗಳು ಬಸವಾದಿ ಶರಣರ ಪರಮಗುರಿ. ಎಲ್ಲ ಕಾಲಕ್ಕಿಂತಲೂ ಇಂದಿನ ಕಾಲದಲ್ಲಿ ಶರಣರ ವಚನಗಳ ಅಗತ್ಯತೆ ಹೆಚ್ಚಾಗಿದೆ.

ಈ ಶತಮಾನದ ಜ್ವಲಂತ ಸಮಸ್ಯೆಗಳಾದ ಭಾಷಾಭೇದ ಜಾತಿಭೇದ, ಧರ್ಮಭೇದ, ಜನಾಂಗಭೇದ ಹಾಗೂ ವರ್ಣಭೇದಗಳಿಂದ ಜಗತ್ತು ತತ್ತರಿಸಿ ಹೋಗುತ್ತಿದೆ. ಸಿಲೋನ್, ಪಂಜಾಬ್, ಕಾಶ್ಮೀರ, ದಾರ್ಜಿಲಿಂಗ, ಅಸ್ಸಾಂಗಳಲ್ಲಿ ಪ್ರತಿನಿತ್ಯ ಮುಗ್ಧ ಮಾನವರ ರಕ್ತ ಹರಿದು ಹೋಗುತ್ತಿದೆ. ದಕ್ಷಿಣ ಆಫ್ರಿಕಾ, ಜರ್ಮನಿಗಳು ಜಾಗತಿಕ ವರ್ಣಭೇದ ಜನಾಂಗಭೇದ ನೀತಿಗೆ ಬಲಿಪಶುವಾಗಿವೆ. ಇಂದು ಪರಮಪಾವನ ಮೂರ್ತಿ ಗಳಾದ ಪೂಜ್ಯ ಶ್ರೀ ಶಿವಕುಮಾರ ಮಹಾಸ್ವಾಮಿಗಳಂತಹ ಪಾವನ ತಪೋಮೂರ್ತಿಗಳ, ಶಿವಯೋಗರಕ್ಷೆಯಲ್ಲಿ ದಕ್ಷಿಣ ಭಾರತ ಶಾಂತ ಶೀತಲವಾಗಿದೆ. ನಮ್ಮಲ್ಲಿಯ ಒಳಾಂಗಣದ ಸಮಸ್ಯೆಗಳಾದ ಜಾತಿಯೊಳಗಿನ ಜಾತಿಗಳು. ಮಡಿಮೈಲಿಗೆಗಳು, ಶರಣರನ್ನು ವಿಶ್ವಗುರು ಬಸವಣ್ಣ ನವರನ್ನೂ ಎಡದ ಕಣ್ಣಿನಿಂದ ಕಾಣುವ ಜಾತಿಭ್ರಮೆಗಳು, ಮಾನವರ ಹೆಗಲ ಮೇಲೆ ಮಾನವರು ಕೂತು ಮೆರೆವ ಅಡ್ಡಪಲ್ಲಕ್ಕಿಗಳು, ಮದುವೆಗಳಲ್ಲಿ ದುಂದುವೆಚ್ಚ, ವರದಕ್ಷಿಣೆಯ ಶೋಷಣೆ, ಉಚ್ಚ-ನೀಚ ಭಾವ, ದೇವದಾಸಿ ಪದ್ಧತಿ, ಕುಡಿತ-ಇಸ್ಪೀಟ್-ತಂಬಾಕ-ಓಸಿ ಮುಂತಾದ ಚಟಗಳು; ಇವುಗಳ ವಿರುದ್ಧವಾಗಿ ಪರಮಪೂಜ್ಯ ಶಿವಕುಮಾರ ಮಹಾಸ್ವಾಮಿಗಳು ಹಲವು ದಶಕಗಳಿಂದ ಯುದ್ಧವನ್ನೇ ಸಾರಿದ್ದಾರೆ.

ಇಂದಿನ ವಾಮಾಚಾರಗಳಿಗೆ ನಮ್ಮ ಮಕ್ಕಳು ಬಲಿಯಾಗಬಾರದೆಂದು, ಪೂಜ್ಯ ಶಿವಕುಮಾರ ಮಹಾಸ್ವಾಮಿ ಗಳವರು ಪ್ರಸಾದ ನಿಲಯದ ಮಹಾನ್ ಆಶ್ರಯ ನೀಡಿ, ಲಕ್ಷಾಂತರ ವಿದ್ಯಾರ್ಥಿಗಳಿಗೆ ಅನ್ನ ದಾಸೋಹ, ಜ್ಞಾನ ದಾಸೋಹ ಅರುಹಿನ ದಾಸೋಹ ನೀಡಿದ್ದಾರೆ. ಸಿದ್ಧಗಂಗೆಯ ಪ್ರಸಾದದಲ್ಲಿ ಬಸವಾದಿ ಶರಣರು ವಾಸಮಾಡಿದ್ದಾರೆ. ಶರಣರು ಸಾರಿದ ಪ್ರಸಾದ ಸಿದ್ಧಾಂತಕ್ಕೆ ಇಂದು ಅತಿ ದೊಡ್ಡ ಏಟು ಬಿದ್ದಿದೆ. ಸಿಕ್ಕಲ್ಲಿ ತಿಂದು, ಸಿಕ್ಕಲ್ಲಿ ಉಂಡು, ಸಿಕ್ಕಿದ್ದನ್ನು ಸೇವಿಸುವ ಅಂತರ ಪಿಶಾಚಿಗಳು ಇಂದು ನಾಡತುಂಬಾ ತಿರುಗಾಡು ತ್ತಲಿದ್ದಾರೆ. ಪ್ರಸಾದವೇ ಪವಿತ್ರಜೀವನದ ಭದ್ರ ಅಡಿಗಲ್ಲು ಎಂದು ಶರಣರು ಅಖಂಡವಾಗಿ ನಂಬಿದ್ದರು. ಪ್ರಾಸಾದಿಕರು ಎಂದರೆ ಪವಿತ್ರ ಜೀವನಕ್ಕೆ ಪೂರಕವಾದ ಪವಿತ್ರ ಪ್ರಸಾದವನ್ನು ಶಿವಸ್ಮರಣೆಯಲ್ಲಿ ಸ್ವೀಕರಿಸಿದವರು ಎಂದರ್ಥ. ಕಾಯಕವಿಲ್ಲದೆ ಪ್ರಸಾದವಿಲ್ಲ ಪ್ರಸಾದವಿಲ್ಲದೆ ಲಿಂಗಾಂಗ ಸಾಮರಸ್ಯವಿಲ್ಲ ಕಾಯಕ, ಪ್ರಸಾದ, ಲಿಂಗಾಂಗ ಸಾಮರಸ್ಯಗಳ ಗುಟ್ಟು ಬಲ್ಲವನೇ ತ್ರಿವಿಧ ದಾಸೋಹಿ, ಈತನೇ ವೀರದಾಸೋಹಿ, ಈತನೇ ಮಹಾದಾಸೋಹಿ ಈ ನಿಟ್ಟಿನಲ್ಲಿ ನಮ್ಮೆದುರಿನಲ್ಲಿ ತೊಳಗಿ ಬೆಳಗುತ್ತಿರುವ ಪೂಜ್ಯ ಶ್ರೀ ಶಿವಕುಮಾರ ಮಹಾಅಪ್ಪಗಳವರು ವೀರದಾಸೋಹಿ ಗಳು, ಮಹಾದಾಸೋಹಿಗಳು ಇವರಿಂದ ವ್ಯಕ್ತಿ ಪರಿವರ್ತನೆ ಹಾಗೂ ವಿಶ್ವಪರಿವರ್ತನೆಗಳ ಸಮಗ್ರ ಕಲ್ಯಾಣ ಸಾಧ್ಯ. ಇಂದು ಅನುಭಾವದ ಆತ್ಮವಿದ್ಯೆ ದೂರ ಸರಿಯುತ್ತ ನಡೆದಿದೆ. ಲೌಕಿಕ ಆಡಂಬರಗಳು ಅತಿಯಾಗುತ್ತಿವೆ ಒಳಗು-ಬೆಳಗುವ ಬದಲು ಹೊರಗು ಬೆಳಗುವವರೇ ತುಂಬಿದ್ದಾರೆ; ಅರುಹಿನಿಂದ ಹಿರಿಯರಾಗುವುದನ್ನು ಮರೆತು, ಒಣ ಆಡಂಬರದಿಂದ ಹಿರಿಯರಾಗಲು ಬಹುಜನರು ಹೊರಟಿದ್ದಾರೆ. ಇವರಿಗಾಗಿ ಅಪ್ಪ ಬಸವಣ್ಣನವರು ಹೇಳುತ್ತಾರೆ.

**ಆನೆಯ ನೇರಿಕೊಂದು ಹೋದಿರೇ ನೀವು,**
**ಕುದುರೆಯ ನೇರಿಕೊಂಡು ಹೋದಿರೇ ನೀವು**
**ಕುಂಕುಮ ಕಸ್ತೂರಿ ಪೂಸಿಕೊಂಡು ಹೋದಿರೇ ಅಣ್ಣ;**
**ಸತ್ಯದ ನಿಲುವ ನರಿಯದೇ ಹೋದಿರಲ್ಲ !**
**ಸದ್ಗುಣವೆಂಬ ಫಲವ ಬಿತ್ತದೆ, ಬೆಳೆಯದೇ ಹೋದಿರಲ್ಲ !**





**ನಮ್ಮ ಕೂಡಲ ಸಂಗಮ ದೇವರನು ಅರಿಯದೇ ನರಕಕ್ಕೆ ಭಾಜನವಾದಿರಲ್ಲ !**

ಇಂಥ ಬಯಲಡಂಬಕ್ಕರಿಗೆ ಇಂದು ಪೂಜ್ಯ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಬದುಕು ಒಂದು ಮಹಾನ್ ದಾರಿ ದೀಪವಾಗಿದೆ. ಸದಾ ಕಾಯಕ, ಸದಾ ಸರಳ ಜೀವನ, ಸದಾ ಅವ್ಯಕ್ತ ಸೇವೆ ನಿರಂತರ ದಾಸೋಹಗಳಿಂದ ಪೂಜ್ಯ ಮಹಾಸ್ವಾಮಿಗಳವರು ಕಣ್ಣೆದುರಿನ ಕೈಲಾಸವಾಗಿದ್ದಾರೆ. ಪೀಠಾರೋಹಣದ ನಿರಂತರ ಆರು ದಶಕಗಳ ಅವರ ದುಡಿಮೆಯ ಫಲವಾಗಿ ಇಂದು ಸಿದ್ಧಗಂಗೆ ಪ್ರಪಂಚದಲ್ಲಿಯೇ ಅತ್ಯುನ್ನತ ಆಧ್ಯಾತ್ಮ ಶಾಲೆಯಾಗಿ ತಲೆಯೆತ್ತಿ ನಿಂತಿದೆ. ಶ್ರೀ ಮಠದ ದಾಸೋಹದ ಪವಿತ್ರ ಪ್ರಸಾದ ಸ್ವೀಕರಿಸಿ, ಸಕಲ ಜಾತಿಮತಗಳ ವಿದ್ಯಾರ್ಥಿಗಳು ಇಂದು ಜಗತ್ತಿನಾದ್ಯಂತ ಪ್ರಸಾದ ಸಾಕ್ಷಿಯಾಗಿ ಬೆಳಗುತ್ತಿದ್ದಾರೆ. ಪೂಜ್ಯರು ಆರಂಭಿಸಿದ ನೂರಾರು ಶಿಕ್ಷಣ ಸೌಧಗಳು ಇಂದು ಪೂಜ್ಯರ ಚಿಂತನ ಚೈತ್ಯಾಲಯಕ್ಕೆ ಪ್ರಯೋಗ ಧಾಮವಾಗಿದೆ. ಇಂಥ ಘನಮಹಿಮರು ಇರುವುದ ರಿಂದಲೇ ನಾಡು ಸರ್ವಾಂಗ ಸುಂದರವಾಗಬಲ್ಲದು. ಪೂಜ್ಯರು ಧರಿಸಿದ ತ್ಯಾಗದ ಕುರುಹಾದ ಕಾವಿಯು ನಾಡಿನ ಮಠಾಧಿಪತಿಗಳಿಗೆಲ್ಲ ಎಂದು ಒಳ್ಳೆಯ ಮೌಲ್ಯವನ್ನು, ಬೆಲೆಯನ್ನು ತಂದಿದೆ. ಇಂದು ದೇಶ ಏನಾದರೂ ಸಮಸ್ಯೆಗಳನ್ನು ಎದುರಿಸುತ್ತಲಿದ್ದರೆ, ಅದಕ್ಕೆ ಮುಖ್ಯ ಕಾರಣ ಇಂಥ ನಿಜಾನುಭಾವಿಗಳನ್ನು ಮರೆತುದೇ ಮುಖ್ಯ ಕಾರಣವಾಗಿದೆ.

ಬಸವ ಎಂದೊಡೆ ಅಸಾಧ್ಯ ಸಾಧ್ಯವಪ್ಪುದು, ಅಭೇದ್ಯ ಭೇದ್ಯವಪ್ಪುದು ಎಂದು ಶರಣರು ಸಾರಿದ ಅನುಭಾವದ ನುಡಿಯನ್ನು ಪೂಜ್ಯ ಶ್ರೀಗಳವರು ನಡೆಗೆ ತಂದು ಅತ್ಯಂತ ಧೈರ್ಯವಾಗಿ ಮುನ್ನಡೆದವರು. ಬದುಕಿನಲ್ಲಿ ಅದೆಂಥ ದುಗುಡ-ದುಮ್ಮಾನಗಳು ಬಂದೆರಗಿದರೂ ಬಸವ ನಿಷ್ಠೆಯನ್ನು ಮೈಗೂಡಿಸಿಕೊಂಡು ಪೂಜ್ಯ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಕೆಚ್ಚದೆಯಿಂದ, ಮುನ್ನುಗ್ಗಿದವರು. ಬಂದೊದಗುವ ಆಪತ್ತು-ವಿಪತ್ತುಗಳನ್ನು ಸದಾ ಹಸನ್ಮುಖರಾಗಿ ಬಸವ ಸ್ಮರಣೆಯಲ್ಲಿ ಪ್ರಸಾದ-ಹಸಾದವೆಂದು ತಮ್ಮ ಆತ್ಮ ಬಲದ ತೇಜದಿಂದ ಬೆಳಗಿದವರು. ಬಸವಾದಿ ಶರಣರ ಅನುಭಾವ ಆಶ್ರಯದಲ್ಲಿ ಪ್ರತಿಯೊಬ್ಬರು ಬದುಕುವುದನ್ನು ಕಲಿಯಬೇಕು. ಲಿಂಗಾನುಭಾವ ಪಡೆದು, ಸಂತೃಪ್ತಿಯ ಶರಣ ಜೀವನವನ್ನು ಸಾಗಿಸಬೇಕು.

**ಆರುವಿನ ತೃಪ್ತಿಗೆ ಅನುಭಾವವೇ ಆಶ್ರಯ**
**ಲಿಂಗಾನುಭಾವದಿಂದ ನಿಮ್ಮ ಕಂಡು ಎನ್ನ ಮರೆದೆ**
**ಕೂಡಲಸಂಗಮದೇವ**

ವೈಜ್ಞಾನಿಕ ಯುಗದ ಇಂದಿನ ಮಾನವನು ಕೇವಲ ಬಹಿರಂಗದ ಭೋಗದ ಬೆನ್ನುಹತ್ತಿ, ಬಾಳಿನಲ್ಲಿ ಸಮಾಧಾನ, ಶಾಂತಿ, ಸ್ಥೈರಣೆ, ಸಂತೃಪ್ತಿಯನ್ನು ಕಳೆದು ಕೊಳ್ಳುತ್ತಲಿದ್ದಾನೆ. ಈ ಅನಾಹುತದಿಂದ ಪಾರಾಗ ಬೇಕಾದರೆ ಮಾನವನು ಮಹಾಮಾನವತಾವಾದಿ ಅಪ್ಪ ಬಸವಣ್ಣನವರ ಆಶ್ರಯ ಪಡೆಯಬೇಕು.

ತನ್ನ ಅಂತರಂಗದೊಳಗೆ ಶಿವನಿಹನು ಎಂಬುದನ್ನು ಮರೆತು, ಎಲ್ಲೆಲ್ಲಿಯೋ ಅಲೆದಾಡುತ್ತಿದ್ದಾನೆ. "ಮಣ್ಣ ಬಿಟ್ಟು ಮಡಕೆ ಇಲ್ಲ. ತನ್ನ ಬಿಟ್ಟು ದೇವರಿಲ್ಲ" ಎಂಬ ಸತ್ಯ ತತ್ತ್ವ ಇಂದು ಮಾನವನಿಗೆ ತಿಳಿಯದಾಗಿದೆ. ಈ ಸತ್ಯವನ್ನು ಅರಿತುಕೊಳ್ಳದೆ ಮೂಢನಾಗಿ ಗುಡಿ-ಗುಂಡಾರಗಳು ತೀರ್ಥ ಕ್ಷೇತ್ರಗಳನ್ನು ಅರಸಿಕೊಂಡು ಬಳಲುತ್ತಿದ್ದಾನೆ. ನಿರಂಜನ ಶರಣ ಜಂಗಮ ವಿಭು ಅಲ್ಲಮ ಪ್ರಭುದೇವರು ಎಚ್ಚರಿಸುತ್ತಾರೆ.

**ಸುತ್ತಿ ಸುತ್ತಿ ಬಂದಡಿಲ್ಲ**
**ಲಕ್ಷ ಗಂಗೆಯ ಮಿಂದಡಿಲ್ಲ**
**ತುಟ್ಟ ತುದಿಯ ಮೇರುಗಿರಿಯ ಮೆಟ್ಟ ಕೂಗಿದಡಿಲ್ಲ**
**ನಿತ್ಯನೇಮದಿಂದ ತನುವ ಮುಟ್ಟಿಕೊಂಡಡಿಲ್ಲ**
**ನಿಚ್ಚಕ್ಕೆ ನಿಚ್ಚ ನೆನೆವ ಮನವ**
**ಅಂದಂದಿಗೆ ಅತ್ತಲಿತ್ತ ಹರಿವ ಮನವ**
**ಚಿತ್ತದಲ್ಲಿ ನಿಲ್ಲಿಸಬಲ್ಲಡೆ**
**ಬಚ್ಚ ಬರಿಯ ಬೆಳಗು ಗುಹೇಶ್ವರ ಲಿಂಗವು.**

ಮಹಾಬೆಳಗಿನ ಸ್ವರೂಪದಲ್ಲಿರುವ ಮಹಾಲಿಂಗ ಚೇತನವು ನಮ್ಮೆಲ್ಲರ ಅಂತರಂಗದಲ್ಲಿದೆ. ಅದುವೆ ಅನುಭಾವಿ ಶರಣರ ಕರುಣೆಯಿಂದ ಇಷ್ಟಲಿಂಗವಾಗಿ ಪ್ರತಿ ಯೊಬ್ಬರ ಕರಸ್ಥಲದಲ್ಲಿ ಬಂದಿದೆ. ಅಪ್ಪ ಬಸವಣ್ಣನವರು ಈ ಲಿಂಗಾನುಭವವನ್ನು ನಮಗೆ ಅರುಹಿದ್ದಾರೆ.

**ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ !**
**ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ**
**ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀ ಮುಕುಟ !**





**ಅಗಮ್ಯ ಅಗೋಚರ ಅಪ್ರತಿಮ ಲಿಂಗವೇ**
**ಕೂಡಲಸಂಗಮದೇವಾ**
**ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯ**

ಇಂತಹ ಸ್ವಾನುಭವ ದೇವರನ್ನು ಮರೆತು ಲಿಂಗವಂತರು ಕಲ್ಲು, ಮಣ್ಣು, ಹಿತ್ತಾಳೆ, ಕಂಚು, ಗುಡಿ, ಗುಂಡಾರ, ಸ್ಥಾವರಾದಿಗಳನ್ನು ದೇವರೆಂದು ಪೂಜಿಸುವ ಮೌಢ್ಯ ನೋಡಿದಾಗ, ಮಂಗನ ಕೈಯಲ್ಲಿ ಮಾಣಿಕ್ಯವಿದ್ದಂತೆ ಪರಿಸ್ಥಿತಿಯಾಗಿದೆ. ಅನುಭಾವಿ ಶರಣರು ಎಚ್ಚರಿಸುತ್ತಾರೆ.

**ಕಲ್ಲ ದೇವರು ದೇವರಲ್ಲ, ಮಣ್ಣು ದೇವರು ದೇವರಲ್ಲ,**
**ಮರ ದೇವರು ದೇವರಲ್ಲ,**
**ಪಂಚಲೋಹದಲ್ಲಿ ಮಾಡಿದ ದೇವರು ದೇವರಲ್ಲ,**
**ಸೇತು ರಾಮೇಶ್ವರ, ಗೋಕರ್ಣ,**
**ಕಾಶಿ, ಕೇದಾರ ಮೊದಲಾದ**
**ಅಷ್ಟಾಷಷ್ಟಿಕೋಟಿ ಪುಣ್ಯಕ್ಷೇತ್ರಗಳಲ್ಲಿಹ**
**ದೇವರು ದೇವರಲ್ಲ.**
**ತನ್ನ ತಾನರಿದು ತಾನಾರೆಂದು ತಿಳಿದಡೆ**
**ತಾನೆ ದೇವನೋಡಾ ಅಪ್ರಮಾಣ ಕೂಡಲಸಂಗಮದೇವಾ.**

ಈ ರೀತಿಯಾಗಿ ಬಸವಾದಿ ಶರಣರು ಮಾನವದೇವತ್ವವನ್ನು ಸಾಧಿಸಿ ತೋರಿದ ಅನುಭಾವವೇ ಲಿಂಗಾನುಭವ, ಶಿವಾನುಭವವಾಗಿದೆ. ಶಿವ ಎಂದರೆ ಮಂಗಲಾತ್ಮಕ ಚೇತನ.

ಇಂತಪ್ಪ ಲಿಂಗಾನುಭವ ಹೊಂದಿದ ಅನುಭಾವಿಯ ಮಾತೆಂಬುದು ಜ್ಯೋತಿರ್ಲಿಂಗ, ಸ್ವರವೆಂಬುದು ಪರತತ್ವ ; ಅದುವೇ ಅನುಭಾವದ ಬೆಳಕಿನ ಕಿರಣಗಳು. ಈ ಲಿಂಗನುಡಿಗಳೇ ವಚನಗಳು.

ಬಸವಾದಿ ಶರಣರ ವಚನಗಳಲ್ಲಿ ಅರಿವು-ಆಚಾರ-ಅನುಭಾವಗಳ ತ್ರಿವೇಣಿ ಸಂಗಮವಿದೆ. ಈ ಅನುಭಾವ ಸರಸಿಯಲ್ಲಿ ಮಿಂದವರೇ ಧನ್ಯರು. ಆದ್ದರಿಂದಲೇ ನಮ್ಮ ಬಸವ ಪರಂಪರೆಯ ಅನುಭಾವಿ ಜಂಗಮ ಜ್ಯೋತಿಗಳಾದ ಪೂಜ್ಯ ಶ್ರೀ ವಿಜಯ ಮಹಾಂತ ಶಿವಯೋಗಿಗಳು, ಅಥಣಿಯ ಶ್ರೀ ಮುರುಘೇಂದ್ರ ಶಿವಯೋಗಿಗಳು, ಹಾಲ್ವಿ ಮಹಾಂತ ಶಿವಯೋಗಿಗಳು, ಮೈಲಾರ ಬಸವಲಿಂಗ ಶರಣರು, ಬಾಲಲೀಲಾ ಮಹಾಂತ ಶಿವಯೋಗಿಗಳು ಮುಂತಾದ ಪೂಜ್ಯರು ಧರ್ಮಪಿತ ಬಸವಣ್ಣನವರ ವಚನಗಳನ್ನು "ಅಪ್ಪನವರ ವಚನಗಳು" ಎಂದು ಭಕ್ತಿಭಾವದಿಂದ-ಮಂತ್ರ ಸ್ವರೂಪವಾಗಿ ಪಠಣ ಮಾಡುತ್ತಿದ್ದರೆಂದು ಕೇಳುತ್ತೇವೆ.

ಷಟಸ್ಥಲಜ್ಞಾನಿ ಚನ್ನಬಸವಣ್ಣನವರು-ಅನುಭಾವದ ಮಹತ್ವವನ್ನು ಕುರಿತು ನಮಗೆ ತಿಳಿ ಹೇಳುತ್ತಾರೆ.

**ಮಂಡೆ ಮಾಸಿದರೆ ಮಹಾಮಜ್ಜನವ ಮಾಡುವುದು**
**ವಸ್ತ್ರ ಮಾಸಿದೊಡೆ ಮಡಿವಾಳರಿಗಿಕ್ಕುವದು**
**ಮನದ ಮೈಲಿಗೆ ತೊಳೆಯಬೇಕಾದರೆ**
**ಕೂಡಲ ಚನ್ನಸಂಗಯ್ಯನ ಅನುಭಾವದ ಮೂಡುವದು**

ಆದ್ದರಿಂದ ಶರಣೆ ಮುಕ್ತಾಯಕ್ಕನವರ ಕರೆಯನ್ನು ಎಲ್ಲರೂ ಕೇಳಬೇಕಾಗಿದೆ.

**ಸುಮ್ಮನೇಕೆ ದಿನ ಕಳೆವಿರಿ**
**ಸುಮ್ಮನೇಕೆ ಹೊತ್ತುಗಳೆವಿರಿ?**
**ಸುಮ್ಮನೇಕೆ ಹೊತ್ತುಗಳೆವಿರಿ ಸ್ವಾಮಿಗಳಿರಾ?**
**ಮಾಡಬನ್ನಿ ದಿನ ಶಿವರಾತ್ರಿಯ**
**ಕೇಳಬನ್ನಿ ಶಿವಾನುಭವದ**
**ನೋಡಬನ್ನಿ ಅಜಗಣ್ಣನಿರವ ಬಸವಣ್ಣ ತಂದೆ.**

ಇಂತಹ ಶಿವನುಭವಕ್ಕಾಗಿ ನಾವೆಲ್ಲ ಹಂಬಲಿಸಬೇಕಾಗಿದೆ. "ಹಿತ್ತಲ ಗಿಡ ಮದ್ದಲ್ಲ" ಎನ್ನುವಂತೆ ಇಂದು ಅನೇಕರು ವಚನಗಳ ಅಧ್ಯಯನ ಚಿಂತನಕ್ಕೆ ಮನಸ್ಸು ಮಾಡದೇ ಬೇರೆ ಬಾವಿಯ ತೋಡಿ ಉಪ್ಪುನೀರನುಂಬುವನ ವಿಧಿಯಂತೆ ಹತ್ತು ದಿಕ್ಕಿಗೆ ಹರಿದು ಚಂಚಲರಾಗಿ ತಿರುಗುತ್ತಿರುವುದನ್ನು ಕಂಡಾಗ ಮರುಕವೆನಿಸುತ್ತದೆ.

ಇಡೀ ಪ್ರಪಂಚಕ್ಕೆ ವಿನೂತನವಾದ ಧರ್ಮ-ಸಾಹಿತ್ಯ-ಸಂಸ್ಕೃತಿಯನ್ನು ಬಸವಾದಿ ಶರಣರು ನೀಡಿರುವುದನ್ನು ನಾವು ಅರಿತು-ಆಚರಿಸಬೇಕಾಗಿದೆ. ನಮ್ಮ ಬಾಳಿನಲ್ಲಿಯ ನೂರೆಂಟು ಮೂಢನಂಬಿಕೆಗಳು, ಅನಾಚಾರ-ದುರಾಚಾರಗಳು ದೂರಾಗಬೇಕು, ಅಂದರೆ ಮಾತ್ರ ಲಿಂಗಾನುಭಾವ ಸಾಧ್ಯ.

ಈ ಮೂಢನಂಬಿಕೆಗಳು ಯಾವಾಗಲೂ ಭಯ, ಭೀತಿ, ಆಶ್ಚರ್ಯ, ಸ್ವಾರ್ಥಬುದ್ಧಿ, ಅಜ್ಞಾನ, ಮೌಢ್ಯಗಳ ಮೇಲೆಯೇ ಆಧಾರಿತವಾಗಿರುತ್ತವೆ. ವ್ರತ-ನೇಮಗಳು, ದೇವರು, ಮಹಾತ್ಮರ ಹೆಸರಿನಲ್ಲಿ ಮಾಡುವ ನಿರರ್ಥಕ ದುಂದುವೆಚ್ಚಗಳು, ಶೈವದ ಅಭಿಷೇಕಾದಿ ಮೌಢ್ಯ ಕ್ರಿಯೆಗಳು, ದೀಪೋತ್ಸವ-ಸಹಸ್ರ ದೀಪೋತ್ಸವ-ಲಕ್ಷ





ದೀಪೋತ್ಸವ ಗಳಂತಹ ಅಮಾನವೀಯ ಮೂಢ ಆಚಾರಗಳು ನಿಲ್ಲಬೇಕೆಂದು ಬಸವಾದಿ ಶರಣರು ಎಚ್ಚರಿಸುತ್ತಾರೆ.

**ಹಾಲ ನೇಮವ ಹಿಡಿದಾತ ಬೆಕ್ಕಾಗಿ ಹುಟ್ಟುವ,**
**ಕಡಲೆಯ ನೇಮವ ಹಿಡಿದಾತ ಕುದುರೆಯಾಗಿ ಹುಟ್ಟುವ,**
**ಅಗ್ಗವಣಿಯ ನೇಮದಾತ ಕಪ್ಪೆಯಾಗಿ ಹುಟ್ಟುವ,**
**ಪುಷ್ಪದ ನೇಮವ ಹಿಡಿದಾತ ತುಂಬಿಯಾಗಿ ಹುಟ್ಟುವ**
**ಇವು ಷಟ್‌ಸ್ಥಲಕ್ಕೆ ಹೊರಗು**
**ಭಕ್ತಿ ನಿಷ್ಠೆಯಿಲ್ಲದವರ ಕಂಡರೆ ಮೆಚ್ಚ ಗುಹೇಶ್ವರಾ,**

ದೇವರು-ದಿಂಡರು, ಸ್ಥಾವರ ಗುಡಿ-ಗದ್ದುಗೆ-ಮೂರ್ತಿಗಳ ಹೆಸರಿನಲ್ಲಿ ತುಪ್ಪದ ದೀಪ, ನಂದಾದೀವಿಗೆ ಉರಿಸುವುದನ್ನಾಗಲಿ, ಅಪ್ಪಾಯನ ಪ್ರಸಾದ ಕೆಡಿಸುವದನ್ನಾಗಲಿ ಶರಣರು ಕಠೋರವಾಗಿ ಖಂಡಿಸುತ್ತಾರೆ. ಇಂದು ದೇಶದಲ್ಲಿ ಅರ್ಧಕ್ಕಿಂತ ಹೆಚ್ಚು ಜನ ಬರಿಹೊಟ್ಟೆಯಲ್ಲಿದ್ದು, ತುತ್ತು ಅನ್ನಕ್ಕಾಗಿ ಪರದಾಡುತ್ತಿರುವಾಗ, ಹಸಿದವರ ಜಠರಾಗ್ನಿ ಸೇರಬೇಕಾದ ಅಜ್ಯ ಬೆಂಕಿಗೆ ಸೇರುವುದನ್ನು ಶರಣರು ಸಹಿಸಲಿಲ್ಲ.

ಕಿಚ್ಚು ದೈವವೆಂದು ಹವಿಯನ್ನಿಕ್ಕುವವರ ಮನೆಯಲ್ಲಿ ಕಿಚ್ಚೆದ್ದು ಸುಡುವಾಗ ಬಚ್ಚಲ ನೀರು ಬೀದಿಯ ಮಣ್ಣು ತಂದು ಸುರುವಿದಾಗ ನಿಮ್ಮ ದೇವರು ದೊಡ್ಡ ಪ್ರಮಾಣದಲ್ಲಿ ಪ್ರತ್ಯಕ್ಷನಾಗಿದ್ದಾನೆಂದು ಏಕೆ ಭಾವಿಸಬಾರದು? ಎಂದು ವಿಡಂಬಿಸುತ್ತಾರೆ. ದೀಪೋತ್ಸವಗಳ ಹೆಸರಿನಲ್ಲಿ ಇಡೀ ದೇಶದಲ್ಲಿ ಸಾವಿರಾರು ಟನ್ ತೈಲ ಸುಡುವ ಅಜ್ಞಾನ ನಿಲ್ಲಬೇಕು. ರೊಟ್ಟಿ-ಚಟ್ನಿ ಖಾರಕ್ಕೆ ಒಂದು ಹನಿ ಎಣ್ಣೇ ಸಿಗದೇ ಪರದಾಡುವ ಕೋಟಿ ಕೋಟಿ ದರಿದ್ರಾವಸ್ಥೆಯ ದೀನ-ದುಃಖಿ-ದಲಿತರನ್ನು ಕಂಡೂ ಕಂಡೂ ನಮ್ಮ ಹೃದಯ ಕರಗುತ್ತಿಲ್ಲ. ಅವರುಗಳ ಬೆವರಿನ ಮೇಲೆ ಅಟ್ಟಹಾಸದ ಆಡಂಬರ ನಡೆಯುವುದನ್ನು ಬಸವಾದಿ ಶರಣರು ಸಹಿಸಲಿಲ್ಲ.

ಇಂದು ಬಸವಾದಿ ಶರಣರ ಹೆಸರಿನಿಂದ, ಅವರ ಹೆಸರು ಹೇಳಿಕೊಳ್ಳುತ್ತಲೇ ಸೇವೆಯ ಸೋಗಿನಲ್ಲಿ ಧಾರ್ಮಿಕ-ಸಾಮಾಜಿಕ-ಶೈಕ್ಷಣಿಕ ಶೋಷಣೆ ನಡೆಯುತ್ತಿರುವುದು ನಿಲ್ಲಬೇಕಾಗಿದೆ.

ಇಡೀ ಮನುಕುಲ ಒಂದು, ಮಾನವರೆಲ್ಲ ದೇವರ ಮಕ್ಕಳು, ಸಕಲ ಜೀವರಾಶಿಗಳಿಗೆ ಲೇಸನೇ ಬಯಸುವ ಕಾರ್ಯ ನಡೆಯಬೇಕಿದೆ. ಇಂದಿಗೂ ಸ್ಪೃಶ್ಯ, ಅಸ್ಪೃಶ್ಯರ ಉದ್ಧಾರದ ಹೆಸರಿನಲ್ಲಿ ಶೋಷಣೆಯೇ ನಡೆಯುತ್ತಿದೆ ಅವರನ್ನು ನಮ್ಮವರು, ಅಪ್ಪ-ಬೊಪ್ಪ ಎಂದು ಅಪ್ಪಿಕೊಳ್ಳುವ ಕಾರ್ಯ ನಡೆಯಬೇಕಿದೆ. ಕನಿಷ್ಠಪಕ್ಷ ಬಸವಣ್ಣ-ಅಲ್ಲಮಪ್ರಭು-ಸಿದ್ಧರಾಮ-ಚೆನಬಸವಣ್ಣ ಮುಂತಾದ ಶರಣರ ವಾರಸುದಾರರೆಂದು ಹೇಳಿಕೊಳ್ಳುವ ನಾವಾದರೂ ಈ ದಿಸೆಯಲ್ಲಿ ಕಾರ್ಯಮಾಡಬೇಕಿದೆ.

**ಅಪ್ಪನು ನಮ್ಮ ಮಾದಾರ ಚೆನ್ನಯ್ಯ,**
**ಬೊಪ್ಪನು ನಮ್ಮ ಡೋಹರ ಕಕ್ಕಯ್ಯ**

ಎಂದು ಮುಂತಾಗಿ ಬಸವಾದಿ ಶರಣರ ವಚನಗಳನ್ನು ಸಭೆ ಸಮಾರಂಭಗಳಲ್ಲಿ ಢಾಣಾಡಂಗುರವಾಗಿ ಸಾರುವ ಅನೇಕ ದೊಡ್ಡವರು, ಇಂದು ನಾವು ನಮ್ಮ ದೀನ-ದಲಿತ-ಅಸ್ಪೃಶ್ಯ ಬಂಧುಗಳನ್ನು ನಮ್ಮವರೆಂದು ಅಪ್ಪಿಕೊಂಡು ಅವರಿಗೆ ಸಂಸ್ಕಾರ ನೀಡುತ್ತಾ, ಅವರಲ್ಲಿ ಪೂಜೆ-ಪ್ರಸಾದ ಸ್ವೀಕರಿಸುವ ಪ್ರಮಾಣಿಕ ಪ್ರಯತ್ನ ಪ್ರಾರಂಭಿಸಿದಾಗ, ಅದನ್ನೇ ಅಪಹಾಸ್ಯವಾಗಿ ಮಾತನಾಡುವ ಹಿರಿಯರೆನ್ನುವವರನ್ನು ಕಾಣುತ್ತಿದ್ದೇವೆ. ನುಡಿಯಲ್ಲಿ ಎಚ್ಚೆತ್ತು ನಡೆಯಲ್ಲಿ ತಪ್ಪಿದರೆ ಹಿಡಿದರ್ಪ ಲಿಂಗ ಘಟಸರ್ಪ ನೋಡಾ ಎಂಬುದನ್ನು ಮರೆಯಬಾರದು.

ಇಂದು ಬಸವಾದಿ ಶರಣರ ಹೆಸರು ಹೇಳಿಕೊಂಡು, ಅವರ ವಚನ ಸಾಹಿತ್ಯವನ್ನು ವಿಫುಲವಾಗಿ ಬಳಸಿಕೊಂಡು ಬೆಳೆದಿರುವ ಕೆಲವರು ಇತ್ತೀಚೆಗೆ ಬಸವಾದಿ ಪ್ರಮಥರ ಚಾರಿತ್ರ್ಯಕ್ಕೆ ಕಲಂಕ ತರುವ ಕೆಲಸವನ್ನು, ಕೆಲವರು ನೇರವಾಗಿ, ಇನ್ನು ಕೆಲವರು ಹಿಂದಿನಿಂದ ಪರೋಕ್ಷವಾಗಿ ಮಾಡುತ್ತಿದ್ದಾರೆ. ಬೆಕ್ಕು ಕಣ್ಣುಮುಚ್ಚಿ ಹಾಲು ಕುಡಿದರೆ ಯಾರು ಕಂಡಿಲ್ಲ ಎಂದು ಭಾವಿಸುವಂತೆ ಇಂಥವರು ನರ್ತಿಸುತ್ತಿದ್ದಾರೆ. ಬಸವಾದಿ ಶರಣರ ನಿಂದೆ-ಟೀಕೆ-ಅವಹೇಳನ ಅವರು ಯಾರೇ ಮಾಡಲಿ ಮಾಡಿರಲಿ ಅದು ಹೇಯ ಕೆಲಸ ಇದನ್ನು ನಾವು ಖಂಡಿಸುತ್ತೇವೆ.

ಹನ್ನೆರಡನೆಯ ಶತಮಾನದ ಅಲ್ಲಮಪ್ರಭು ದೇವರಿಂದ ಹಿಡಿದು ತೋಂಟದ ಸಿದ್ಧಲಿಂಗ ಶಿವಯೋಗಿಗಳು, ಷಣ್ಮುಖ ಶಿವಯೋಗಿಗಳು, ಮೈಲಾರ ಬಸವಲಿಂಗ ಶರಣರು, ಬಾಲಲೀಲಾ ಮಹಾಂತ ಶಿವಯೋಗಿಗಳು, ಘನಮಠ ಶಿವಯೋಗಿಗಳು, ಅಥಣಿ ಶಿವಯೋಗಿಗಳು, ವಿಜಯ ಮಹಾಂತ ಶಿವಯೋಗಿಗಳು,

ವಚನ ಪಿತಾಮಹ ಫ.ಗು. ಹಳಕಟ್ಟಿ ಶರಣರು ನಿರಂಜನ ಶರಣ ಹರ್ಡೇಕರ ಮಂಜಪ್ಪನವರು ಮುಂತಾದ ಪೂಜ್ಯರೆಲ್ಲ "ಅಪ್ಪ ಬಸವಣ್ಣನವರನ್ನು ಧರ್ಮ ಗುರುವೆಂದು, ವಿಶ್ವ ಗುರುವೆಂದು, ಪೂರ್ವಾಚಾರಿ, ಪ್ರಥಮಾಚಾರ್ಯ, ಲಿಂಗಾಚಾರ್ಯ, ಜಂಗಮಾಚಾರ್ಯನೆಂದು ಅಷ್ಟೇ ಏಕೆ ಶಿವನೇ ಬಸವಾ ಶಿವನೇ ಎಂದು "ಶಿವಬಸವ" ನೆಂದು ಎದೆತುಂಬಿ ಸ್ತುತಿಸುತ್ತಿದ್ದಾರೆ.

ಬಸವಾದಿ ಶರಣ-ಶರಣೆಯರ ವಚನಗಳೇ ನಮಗೆ ಮಂತ್ರ ಸ್ವರೂಪ, ಪ್ರಾಣ ಸ್ವರೂಪ, ಮಾತೃಸ್ವರೂಪವಾಗಿರುವಾಗ ಬೇರೆ ಭಾವಿಯ ತೋಡಿ ಉಪ್ಪು ನೀರನುಂಬುವನ ವಿಧಿಯಂತೆ ನಮ್ಮ ಗತಿಯಾಗಬಾರದು. ಇನ್ನಾದರೂ ಎಚ್ಚೆತ್ತುಕೊಳ್ಳೋಣ. ಇಡೀ ವಿಶ್ವದಲ್ಲಿಯೇ ವಿನೂತನವಾಗಿರುವ ಮಾನವೀಯ ಮೌಲ್ಯಗಳಿಂದ ಕೂಡಿದ ಬಸವ ತಂದೆಯ ಧರ್ಮ-ಸಾಹಿತ್ಯ-ಸಂಸ್ಕೃತಿ ಪರಂಪರೆಯ ಜನ ನಾವೆಂದು ತಲೆ ಎತ್ತಿ ಬದುಕುವುದನ್ನು ಕಲಿಯಬೇಕಾಗಿದೆ.

ಪ್ರಪಂಚಕ್ಕೆ ಕಾಯಕ-ದಾಸೋಹ-ಪ್ರಸಾದ ಸಂದೇಶ, ಕಾಣಿಕೆ ನೀಡಿದ ನಮ್ಮ ಸಮಾಜದಲ್ಲಿ ಭಿಕ್ಷೆ ಬೇಡುವ ಜನ ಇರಬಾರದು. ಕಾಯಕನಷ್ಟ ಮಾಡಿ ದುಡಿದು, ಕಾಯಕದಿಂದ ಬಾಳುವೆವೆಂಬ ಧೀಮಂತ ಜನ, ಸ್ವಾಭಿಮಾನಿ ಸ್ವಾವಲಂಬಿ ಜನ ನಿರ್ಮಾಣವಾಗಬೇಕು.

ಎಲ್ಲಿಯೋ ಒಂದೋ-ಎರಡೋ ಸಿಗಬಹುದಾದ ಸರಕಾರಿ-ಸೌಲಭ್ಯಗಳಿಗಾಗಿ ಧರ್ಮ-ಸಂಸ್ಕೃತಿ ಮರೆತು ಹಿಂದುಳಿದವರೆಂದು ಕರೆದುಕೊಳ್ಳಲು ಹಂಬಲಿಸದೇ, ಇಂದು ಲಕ್ಷಾವಧಿ-ಕೋಟಿ-ಕೋಟಿ ಸಂಪತ್ತುಳ್ಳ ಮಠ ಪೀಠಾಧಿಪತಿಗಳು, ಶ್ರೀಮಂತ ವ್ಯಾಪಾರಸ್ಥರು, ವಾಣಿಜ್ಯೋದ್ಯಮಿಗಳು, ಧನಿಕ ಜಮೀನುದಾರರು ಮುಂದೆ ಬಂದು ಪ್ರತಿಯೊಂದು ಜಿಲ್ಲೆ-ತಾಲ್ಲೂಕು-ಊರುಗಳಲ್ಲಿ ಕಾಯಕದ ಯೋಜನೆಗಳನ್ನು ರೂಪಿಸಿ-ನಿರುದ್ಯೋಗಿ ಬಡ ಯುವಕರಿಗೆ ಸ್ವಯಂ-ಉದ್ಯೋಗ ಅವಕಾಶಗಳನ್ನು ಕಲ್ಪಿಸುವತ್ತ ಮನಸ್ಸು ಮಾಡಬೇಕು ಶೀಘ್ರವಾಗಿ ಕಾರ್ಯ ಕೈಗೊಳ್ಳಬೇಕು. ಬಸವಾದಿ ಶರಣರು ಕಲ್ಪಿಸಿ-ರೂಢಿಸಿದ ನೂರಾರು ಕಾಯಕಗಳ ಉದಾಹರಣೆ ನಮ್ಮ ಮುಂದೆ ಇದೆ. ಅದನ್ನು ಹಿಂದಿನ ಆಧುನಿಕ ಜೀವನ ಕಲ್ಯಾಣಕ್ಕೆ ತಕ್ಕಂತೆ ಬಳಸಿಕೊಳ್ಳುವ ಯೋಜನೆಗಳನ್ನು ಹಮ್ಮಿಕೊಳ್ಳುವತ್ತ ಮನಸ್ಸು ಮಾಡಬೇಕು.

ಬಸವಾದಿ ಶರಣರ-ಧರ್ಮಸಮಾಜದವರೆಂದು ಹೇಳಿಕೊಳ್ಳುವ ನಮ್ಮಲ್ಲಿ ಅಯ್ಯನವರು, ಪಂಚಮಸಾಲಿ, ಬಣಜಿಗರು, ಗಾಣಿಗರು, ರೆಡ್ಡಿ, ನೇಕಾರ, ಶಿವಸಿಂಪಿಗ, ಹೂಗಾರ ಕುಂಬಾರ, ಮಡಿವಾಳ, ಹಡಪಿಗ, ಡೋಹರ, ಸಮಗಾರ, ನೊಣಬ, ಗೌಡ, ಸಾದರ ಬಡಿಗ, ಒಕ್ಕಲಿಗ, ತೋಟಗೇರ ಇನ್ನೂ ಮುಂತಾದ ನೂರಾರು ಒಳಪಂಗಡಗಳನ್ನು ಕಲ್ಪಿಸಿಕೊಂಡು ಮೇಲು ಕೀಳು ಎಂದು ಬಡಿದಾಡುವುದು ನಿಲ್ಲಬೇಕಿದೆ. ಅಂಗದ ಮೇಲೆ ಇಷ್ಟಲಿಂಗ ಧರಿಸುವ "ನಾವೆಲ್ಲರೂ ಲಿಂಗವಂತರು" ಎಂಬ ಭಾವನೆ ಗಟ್ಟಿಗೊಳ್ಳಬೇಕು. ಲಿಂಗವಂತರಲ್ಲಿ ಒಳಪಂಗಡ ಭೇದವೆಣಿಸದೇ ಮದುವೆ-ಕಲ್ಯಾಣಗಳು ಪ್ರಾರಂಭವಾಗಬೇಕು, ಸತ್ಯ-ಶುದ್ಧ-ಕಾಯಕದ ಜೀವನ ನಮ್ಮದಾಗಬೇಕು.

ಈ ದಿಸೆಯಲ್ಲಿ ಸಮಾಜಕ್ಕೆ ಮಠಾಧೀಶರು ಮಾರ್ಗದರ್ಶಕವಾಗಬೇಕಿದೆ. ಸಮಾಜ ತಪ್ಪಿದಲ್ಲಿ ಮಠಾಧಿಪತಿಗಳು ತಿದ್ದಬೇಕು, ಮಠಾಧಿಪತಿಗಳು ಕರ್ತವ್ಯವಿಮುಖರಾದಾಗ ಸಮಾಜ ಜಾಗೃತರಾಗಿ ಎಚ್ಚರಿಸಬೇಕು.

ಒಟ್ಟಿನಲ್ಲಿ, ಬಸವಾದಿ ಶರಣರ ಶಿವಾನುಭವ ಎಂದರೆ ಅದು ಕೇವಲ ಪಲಾಯನವಲ್ಲ ಲೋಕಾನುಭವವನ್ನೇ ಶಿವಾನುಭವವನ್ನಾಗಿ ಪರಿವರ್ತಿಸಿಕೊಂಡು, ಅಂತರಂಗ-ಬಹಿರಂಗವೆಂಬ ಭೇದವಿಲ್ಲದೆ ಸುಂದರ-ಸಮನ್ವಯ-ಸಮರಸದ, ಅರಿವು-ಆಚಾರ-ಅನುಭಾವದ ಬದುಕಾಗಿದೆ. ಇಂತಹ ಅನುಭವದ ಬದುಕು ನಮ್ಮದಾಗಲಿ.

ಈ ನಿಟ್ಟಿನಲ್ಲಿ ಇಂದಿನ ಈ ಮಹಾನ್ ಸಮಾರಂಭ ಶ್ರೀ ಶಿವಕುಮಾರ ಅಪ್ಪಗಳವರ ಜೀವನ ಮಹಾಕಾವ್ಯದ ಮಹಾಸ್ಮರಣೆಯಾಗಲಿ, ಅವರ ಚಿಂತನ ಪ್ರಭೆಯಾಗಿ, ಶ್ರೀ ಸಿದ್ಧಗಂಗಾ ಶ್ರೀ ಭಾರತ ಶ್ರೀಯಾಗಲೀ, ವಿಶ್ವ ಮಾನವರಾಗಿ, ಶರಣರಾಗಿ ಕಾಯಕಯೋಗಿಗಳಾಗಿ ಬದುಕುವುದೇ ಪೂಜ್ಯ ಪಾದರಿಗೆ ಸಲ್ಲಿಸಬೇಕಾದ ನಿರಂತರ ದಕ್ಷಿಣೆಯಾಗಿದೆ. ಇಂದಿನ ಈ ಸಮಸ್ತ ಮಹಾನ್ ಸಭೆ, ಪೂಜ್ಯರ ಪ್ರಭಾವಳಯದ ಅಂಗಳದಲ್ಲಿ ಸೇರಿರುವುದು ಅರ್ಥಪೂರ್ಣವಾಗಿದೆ. ಪೂಜ್ಯರು ಇನ್ನೂ ಹಲವಾರು ದಶಕ ನಮ್ಮೆದುರುಗೆ ಇರಲಿ, ನಾಡಿಗೆ ಮಹಾನ್ ಸಂದೇಶವಾಗಿ ಶರಣ ಸಾಕ್ಷಿಯಾಗಿ ಬೆಳಗಲಿ ಎಂದು ಹಾರೈಸಿ ಅಪ್ಪ ಬಸವಣ್ಣನವರ ಕರುಣೆ ತಮ್ಮ ಮೇಲಿರಲಿ.

ಎಲ್ಲರಿಗೂ ಶರಣುಗಳು



ಶರಣಾಂಜಲಿ

# ಅನುಪಮ ಸೇವಾಜೀವಿ ಲಿಂ. ಸಿ.ಎಸ್. ಸಿದ್ಧಲಿಂಗಯ್ಯನವರು

– ಕೋ.ರಂ. ಬಸವರಾಜು *



**ಯಾವುದೇ** ಒಂದು ಸಂಸ್ಥೆಯ ಬೆಳವಣಿಗೆಯ ಹಿಂದೆ ಅನೇಕ ಸೇವಾಶೀಲಸುಭೃತ್ಯರ ಅವಿಅರತವಾದ ಶ್ರಮವಿರುತ್ತದೆ. ಇಂಥ ಸೇವಾಜೀವಿಗಳು ಸಂಸ್ಥೆಗೆ ಲಭಿಸುವುದೇ ಒಂದು ಭಾಗ್ಯವಿಶೇಷ. ನಮ್ಮ ಸಿದ್ಧಗಂಗಾ ಕ್ಷೇತ್ರದ ಪುರೋಭಿವೃದ್ಧಿಯಲ್ಲಿಯು ಸಹ ದಣಿವರಿಯದ ಅನೇಕ ಸೇವಾಜೀವಿಗಳ ಸಹಭಾಗಿತ್ವವಿದೆ. ಇಂತಹವರ ಸಾಲಿನಲ್ಲಿ ಶ್ರೀ ಸಿ.ಎಸ್. ಸಿದ್ಧಲಿಂಗಯ್ಯನವರು ಅಗ್ರಗಣ್ಯರಾಗಿದ್ದಾರೆ. ಅವರ ಪೂರ್ಣ ಹೆಸರು ಕಂಬಾಳು ಸಿದ್ಧಪ್ಪ ಸಿದ್ಧಲಿಂಗಯ್ಯ ಎಂದು. ಅವರ ಬದುಕು ಮತ್ತು ಸೇವೆಯ ಕಿರುಪರಿಚಯ ಇಂತಿದೆ.

**ಬದುಕು :** ಶ್ರೀ ಸಿ.ಎಸ್.ಎಸ್. ಅವರ ವಂಶಸ್ಥರು ಮೂಲತಃ ಶಿವಗಂಗಾ ಪರಿಸರದ ಕಂಬಾಳು ಗ್ರಾಮದಿಂದ ಬಂದು ಸೋಂಪುರದ (ದಾಬಸ್‌ಪೇಟೆ) ಕೂಗಳತೆಯಲ್ಲಿರುವ ತಿಮ್ಮನಾಯಕನಹಳ್ಳಿಯಲ್ಲಿ ನೆಲಸಿದವರು. ಕಂಬಾಳು ಸಿದ್ಧಪ್ಪನವರು ತಮ್ಮ ಧರ್ಮಪತ್ನಿ ಅಮ್ಮಯ್ಯಮ್ಮನವರೊಂದಿಗೆ ಈ ಊರಿನಲ್ಲಿ ಬದುಕಿನ ನೆಲೆಯನ್ನು ಕಂಡುಕೊಂಡರು. ಬಂಧುಗಳಿಂದ ಬಂದ ಎರಡು ಎಕರೆ ಒಣಭೂಮಿಯಲ್ಲಿ ದುಡಿದು ತನ್ನ ಮಕ್ಕಳನ್ನು ಸಾಕಿ ಸಲಹಿದ ಸಾಹಸಿಗರು. ಬರಬರುತ್ತ ಕುಟುಂಬವು ಜೇನುಗೂಡಿನಂತೆ ದೊಡ್ಡದಾಯಿತು. ಮನೆಯ ಮಂದಿಯೆಲ್ಲಾ ಕಾಯಕಷ್ಟಮಾಡಿ ನ್ಯಾಯಬದ್ಧರಾಗಿ ದುಡಿದು ಹತ್ತಾರು ಎಕರೆ ಜಮೀನನ್ನು ಸಂಪಾದಿಸಿ ಸೋಂಪುರ ಹೋಬಳಿಗೆ ದೊಡ್ಡ ಅವಿಭಕ್ತ ಮಾದರಿ ಕುಟುಂಬವೆನಿಸಿತು. ಅವರ ಕುಟುಂಬದವರು ಹೃದಯ ಶ್ರೀಮಂತರೂ, ಸದಾಚಾರಸಂಪನ್ನರೂ, ಶಿವಾಚಾರಿಗಳೂ ಆಗಿದ್ದರು. ಕೃಷಿ ಕಾಯಕದಿಂದ ಅವರ ತನುಮನ ಭಾವಗಳು ಪರಿಶುದ್ಧವಾಗಿದ್ದವು. ಗುರುಲಿಂಗಜಂಗಮ ಪ್ರೇಮಿಗಳಾಗಿದ್ದರು. ವಿಶೇಷವೆಂದರೆ ಅವರ ಕುಟುಂಬದವರು ವಂಶಾನುಗತವಾಗಿ ಬಂದ 'ಐಯ್ಯಾಚಾರಸ್ಥಲ'ದವರಾಗಿದ್ದರು. ಐಯ್ಯಾಚಾರ ಎಂದರೆ ವೀರಶೈವದ ವಿಶೇಷ ದೀಕ್ಷೆ ಪಡೆದು ಕೋರಾನ್ನ ಭಿಕ್ಷೆ ಮಾಡಿ ಹಬ್ಬ ಹರದಿನಗಳಲ್ಲಿ ಲಿಂಗವಂತರ ಮನೆಗಳಿಗೆ ಹೋಗಿ ಬಿನ್ನಹ ತೀರಿಸುವ ಕಾಯಕ. ಸಿದ್ಧಗಂಗೆಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳ ಪೂರ್ವದಲ್ಲಿ ಶ್ರೀ ಮದುದ್ದಾನ ಶಿವಯೋಗಿಗಳವರ ಉತ್ತರಾಧಿಕಾರಿಗಳಾಗಿದ್ದ ಶ್ರೀ ಮರುಳಾರಾಧ್ಯ ಮಹಾಸ್ವಾಮಿಗಳು ಶ್ರೀ ಸಿ.ಎಸ್.ಎಸ್. ಅವರ ಆಲೇನಹಳ್ಳಿಯ ಸೋದರ ಸಂಬಂಧಿಗಳೆಂಬುದು ಮತ್ತೊಂದು ವಿಶೇಷ.

ಶ್ರೀ ಸಿ.ಎಸ್. ಸಿದ್ಧಲಿಂಗಯ್ಯನವರು ಸಿದ್ಧಪ್ಪ-ಅಮ್ಮಯ್ಯಮ್ಮ ಪುಣ್ಯದಂಪತಿಗಳ ಚಿದ್‌ಗರ್ಭಾಂಬುಧಿಯಲ್ಲಿ ದಿನಾಂಕ ೧೦-೦೮-೧೯೩೩ ರಂದು ಕೊನೆಯ ಪುತ್ರರಾಗಿ ಜನ್ಮತಾಳಿದರು. ಶ್ರೀ ಮರುಳಸಿದ್ಧಯ್ಯ, ಶ್ರೀ ಸಿದ್ಧಯ್ಯ, ಶ್ರೀ ಚನ್ನವೀರಯ್ಯ, ಮತ್ತು ಶ್ರೀ ಮಲ್ಲಿಕಾರ್ಜುನಯ್ಯ ಎಂಬುವರು ಅಣ್ಣಂದಿರು. ಕೆಂಪಮ್ಮ ಎಂಬವರು ಏಕಮಾತ್ರ ಸಹೋದರಿ. ಕಡುಬಡತನವಿದ್ದರೂ ತಂದೆ ಬಾಲ್ಯದಲ್ಲಿಯೇ ತೀರಿಹೋದರೂ ಅಕ್ಕ ಅಣ್ಣಂದಿರ ಪ್ರೀತಿಯ ಅಕ್ಕರೆಯಲ್ಲಿ ಬೆಳೆದರು. ಕಷ್ಟಪಟ್ಟು ಓದಿ ಬಿ.ಎಸ್ಸಿ. ಪದವೀಧರರಾದರು. ನಂತರ ಜೀವನಕ್ಕಾಗಿ ಸಿದ್ಧಗಂಗೆಯ ಪರಮಪೂಜ್ಯರ ಆಶ್ರಯ ಪಡೆದು ಸಂಸ್ಥೆಯ ಮಾಧ್ಯಮಿಕ ಶಾಲೆಯಲ್ಲಿ ಅಧ್ಯಾಪಕರಾದರು. ನಂತರ ಕೆಲವು ದಿನಗಳಲ್ಲಿಯೇ ಸರಕಾರದ ಕಂದಾಯ ಇಲಾಖೆಯಲ್ಲಿ ನೌಕರಿ ಸಿಕ್ಕಿತು. ಆದರೆ ಪರಮಪೂಜ್ಯರ ಅಪೇಕ್ಷೆ ಮತ್ತು ಅನುಗ್ರಹದಂತೆ ಶ್ರೀಕ್ಷೇತ್ರದಲ್ಲಿಯೇ ಉಳಿಯುವಂತಾಯಿತು. ಮುಂದೆ ಬಿ.ಇಡಿ. ಮತ್ತು ಎಂ.ಎಸ್ಸಿ. ಪದವಿಯನ್ನು ಪಡೆದು ಖಾಯಂ ಆಗಿ ಶ್ರೀಮಠದ

* ನಿವೃತ್ತ ಸಹಾಯಕ ಪ್ರಾಧ್ಯಾಪಕರು, ಮಧುಕೇಶ್ವರ ನಿಲಯ, ಎಸ್.ಐ.ಟಿ. ೬ನೇ ಕ್ರಾಸ್, ಎಸ್.ಐ.ಟಿ. ಬಡಾವಣೆ, ತುಮಕೂರು. ಮೊ: ೯೯೦೧೩೩೪೩೬೩





ಸೇವೆಯಲ್ಲಿಯೇ ತೊಡಗಿದರು. ಅಂದು ಶ್ರೀಮಠದ ಸಂಸ್ಕೃತ ಪ್ರಾಧ್ಯಾಪಕರು, ವ್ಯವಸ್ಥಾಪಕರು ಆಗಿದ್ದ ವಿದ್ವಾನ್ ಶ್ರೀ ಬಿ.ಗಂಗಪ್ಪನವರ ಸಾಕು ಮಗಳಾದ ಜಯಮ್ಮ ಎಂಬುವರೊಂದಿಗೆ ವಿವಾಹವಾಯಿತು. ಅಂದಿನಿಂದ ಅವರ ಬದುಕಿನ ಜಯದ ಬಾಗಿಲು ತೆರೆಯಿತು. ಜಯ ಎಂದರೆ ಪುಣ್ಯ ಎಂದರ್ಥ.

**ಸೇವೆ :**

**'ಸೇವಾ ಹಿ ಪರಮೋಧರ್ಮಃ ಯೋಗಿನಾಮಪ್ಯ ಗಮ್ಯಃ'**
(ಸೇವಾಧರ್ಮ ಬಹಳ ದೊಡ್ಡದು. ಅದನ್ನು ಯೋಗಿ ಗಳಿಂದಲೂ ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ)

೧೯೫೩ರಲ್ಲಿ ಸೇವೆಗೆ ಸೇರಿದ ಶ್ರೀ ಸಿ.ಎಸ್.ಎಸ್. ರವರು ಮುಖ್ಯೋಪಾಧ್ಯಾಯರಾಗಿ, ಪ್ರಾಂಶುಪಾಲರಾಗಿ ದಕ್ಷತೆ ಮತ್ತು ಪ್ರಾಮಾಣಿಕವಾಗಿ ಮೂವತ್ತೆಂಟು ವರ್ಷಗಳು ಸಾರ್ಥಕ ಸೇವೆ ಸಲ್ಲಿಸಿ ೩೧-೦೯-೧೯೯೧ರಂದು ವಯೋನಿವೃತ್ತಿಯನ್ನು ಹೊಂದಿದರು. ಆದರೆ ಸಂಸ್ಥೆಯ ಸೇವೆಯಿಂದ ನಿವೃತ್ತರಾಗಲಿಲ್ಲ. ಪರಮಪೂಜ್ಯರು ತಮ್ಮ ಸಂಸ್ಥೆಯ ವಿದ್ಯಾಧಿಕಾರಿಯನ್ನಾಗಿ ನೇಮಿಸಿಕೊಂಡರು. ಹಾಗಾಗಿ ಪರಮಾಪ್ತ ಸೇವಕರಾದರು. (ಯಥಾರ್ಥ ವಕ್ತೃಗಳನ್ನು ಆಪ್ತರೆನ್ನುವರು) ಶ್ರೀ ಸಿ.ಎಸ್.ಎಸ್. ಅವರು ಸೇವೆಯ ಸಾಕಾರಮೂರ್ತಿ ಯಾಗಿದ್ದರು. ನಿಜಸೇವಕನ ಲಕ್ಷಣವನ್ನು ಸುಭಾಷಿತ ವೊಂದು ಹೀಗೆ ಸಾದರಪಡಿಸುತ್ತದೆ.



**'ನ ಕ್ಷುಧಾ ಪೀಡ್ಯತೇ ಯಸ್ತು ನಿದ್ರಯಾ ನ ಕದಾಚನ ।**
**ನ ಶೀತಾತಪಾದ್ಯೈಶ್ಚ ಸ ಭೃತ್ಯಾರ್ಹೋ ಮಹಾತ್ಮನಾಂ ॥**

ಯಾರನ್ನು ಹಸಿವು, ನಿದ್ರೆ, ಶೀತ, ಬಿಸಿಲು ಮುಂತಾದುವುಗಳು ಪೀಡಿಸಲಾರವೋ ಅವನೇ ನಿಜವಾದ ಸೇವಕ. ಈ ಮಾತಿಗೆ ಸಿ.ಎಸ್.ಎಸ್. ಉದಾಹರಣೆ ಯಾಗಿದ್ದರು. ಬೆಳಿಗ್ಗೆ ಪೂಜೆ ಪ್ರಸಾದ ಮುಗಿಸಿಕೊಂಡು ಹೋದರೆ ಪೂರ್ವಾಹ್ನ ಸಂಸ್ಕೃತ ಕಾಲೇಜಿನ ಪ್ರಾಂಶುಪಾಲರ ಕೆಲಸ, ಮಧ್ಯಾಹ್ನ ಪ್ರೌಢಶಾಲಾ/ ಪದವಿಪೂರ್ವ ಕಾಲೇಜಿನ ಕರ್ತವ್ಯ, ಅಪರಾಹ್ನ ಶ್ರೀಮಠದ ಆಡಳಿತ ಸೇವೆಯನ್ನು ಪೂರೈಸಿಕೊಂಡೇ ಸಂಜೆ ಮನೆಗೆ ಬರುತ್ತಿದ್ದರು.

ಶ್ರೀ ಸಿ.ಎಸ್. ಸಿದ್ಧಲಿಂಗಯ್ಯನವರು ಸಂಸ್ಥೆಯ ಯಾವುದೇ ಒಂದು 'ದಸರಿಗಂಟಿ' ನಂತಹ ಸಮಸ್ಯೆಯನ್ನು ನವುರಾಗಿ ಬಿಡಿಸುತ್ತಿದ್ದರು. (ದಸರಿ ಗಂಟು ಎಂದರೆ ರೇಷ್ಮೆ ದಾರದ ಗಂಟು. ರೇಷ್ಮೆ ದಾರದ ಗಂಟನ್ನು ಬೇರೆ ದಾರದ ಗಂಟಿನಂತೆ ಸರಳವಾಗಿ ಬಿಡಿಸಲು ಆಗುವುದಿಲ್ಲ. ಅದಕ್ಕೆ ತಾಳ್ಮೆ, ವ್ಯವಧಾನ ಹಾಗೂ ಬುದ್ಧಿವಂತಿಕೆ ಬೇಕು) ಇಂಥ ದಕ್ಷತೆ ಮತ್ತು ಕಾರ್ಯಸಿದ್ಧಿ ಅವರಲ್ಲಿತ್ತು.



**'ಅನಿರ್ವೇದಂ ಚ ದಾಕ್ಷ್ಯಂಚ ಮನಸಶ್ಚಾಪರಾಯಂ ।**
**ಕಾರ್ಯಸಿದ್ಧಿಪರಾಣ್ಯಾಹುಃ ತಸ್ಮಾದೇತದ್ ಬ್ರವೀಮಹ್ಯಂ ॥**

ಬೇಸರವಿಲ್ಲದ ಉತ್ಸಾಹ, ದಕ್ಷತೆ, ಸೋಲನ್ನೊಪ್ಪಿ ಕೊಳ್ಳದ ಮನಸ್ಸು ಇವು ಕಾರ್ಯಸಿದ್ಧಿಯ ಪ್ರಮುಖ ಸಾಧನಗಳು ಎಂಬ ಆರ್ಯೋಕ್ತಿಗೆ ಉದಾಹರಣೆಯಾಗಿದ್ದರು. ಅವರ





ಮಾತೂ ಕೂಡ ಮೃದುವಾಗಿತ್ತು. ಅಷ್ಟೇ ಪ್ರಿಯವಾಗಿತ್ತು 'ಕುರಡಕ್ಕನನ್ನು ಚೆನ್ನಕ್ಕನೆಂದು ಕರೆಯುವಂತೆ'.

**ಪ್ರಿಯವಾಕ್ಯಪ್ರದಾನೇನ ಸರ್ವೇ ತುಷ್ಯಂತಿ ಜಂತವಃ ।**
**ತಸ್ಮಾತ್ ತದೇವ ವಕ್ತವ್ಯಂ ವಚನೇ ಕಾ ದರಿದ್ರತಾ ॥**

ಶ್ರೀ ಸಿ.ಎಸ್.ಎಸ್. ರವರು ನಿರಹಂಕಾರಿ, ನಿರ್ಮತ್ಸರಿ, ನಿರ್ಲಿಪ್ತರಾಗಿದ್ದರು. ಅರಿತವನು ನಾನೆಂಬ ಗರ್ವವಿರಲಿಲ್ಲ. ಅರಿವೆಂಬುದು ಶರಧಿ, ಅದರಲ್ಲಿ, ನನ್ನರಿವು ಏನೂ ಅಲ್ಲ ಎಂದು ಭಾವಿಸಿದ್ದರು. ಎಲ್ಲರೊಳಗೊಂದಾಗಿ ಬೆರೆಯುತ್ತಿದ್ದರು. ಅದರಂತೆ ಅವರು ಸಂಸಾರವನ್ನು ಎಂದೂ ಉದಾಸೀನ ಮಾಡಿದವರಲ್ಲ. ಅದು ಸಮ್ಯಕ್‌ಸಾರವಾಗಿತ್ತು. ಗೃಹಸ್ಥ ಧರ್ಮದ ಧನ್ಯತೆಯನ್ನು ಸಾರುವಂತಿತ್ತು.

**ಸಾನಂದಂ ಸದನಂ ಸುತಾಶ್ಚ ಸುಧಿಯಃ**
**ಕಾಂತಾ ನ ದುರ್ಭಾಷಿಣೀ**
**ಸನ್ಮಿತಂ ಸುಧನಂ ಸ್ವಯೋಷಿತಿರತಿಃ**
**ಆಜ್ಞಾಪರಾಃ ಸೇವಕಾಃ । ಆತಿಥ್ಯಂ ಶಿವಪೂಜನಂ**
**ಪ್ರತಿದಿನಂ ಮೃಷ್ಟಾನ್ನಪಾನಂ ಗೃಹೇ**
**ಸಾಧೋಃ ಸಂಗಮುಪಾಸತೇ ಹಿ ಸತತಂ**
**ಧನ್ಯೋಗೃಹಸ್ಥಾಶ್ರಮಃ ॥**

ಆನಂದ ತುಂಬಿದ ಮನೆ, ಬುದ್ಧಿವಂತ ಮಕ್ಕಳು, ಸುಭಾಷಿಣಿಯಾದ ಪತ್ನಿ, ಒಳ್ಳೆಯ ಸ್ನೇಹಿತರು, ನ್ಯಾಯಾರ್ಜಿತಸಂಪದ, ಆಜ್ಞಾರಾಧಕರಾದ ಆಳುಗಳು, ಪ್ರತಿದಿನ ಮನೆಯಲ್ಲಿ ಜಂಗಮಪೂಜೆ, ಪಾದೋದಕ ಪ್ರಸಾದ, ಅತಿಥಿ ಸತ್ಕಾರ, ಸಾಧುಸಜ್ಜನರ ನಿರಂತರ ಸೇವೆ ಇವುಗಳಿಂದ ತುಂಬಿದ ಗೃಹಸ್ಥಾಶ್ರಮವೇ ಎಲ್ಲ ಆಶ್ರಮಗಳಿಗಿಂತ ಶ್ರೇಷ್ಠವಾದದ್ದು. ಅಂತಹ ಗೃಹಸ್ಥಾಶ್ರಮಿಯೇ ಧನ್ಯ. ಆದರೆ ಇಂಥ ಧನ್ಯತೆಯನ್ನು ಪಡೆದ ಸಿ.ಎಸ್.ಎಸ್. ಅವರನ್ನು ಕೂಡ ಪೂರ್ವಾರ್ಜಿತ ಕರ್ಮ ಬೆಂಬಿಡದೆ ಕಾಡಿತ್ತು.

**'ಶಯಾನಾಂ ಚಾನುಶಯತಿ ತಿಷ್ಠಂತಂ ಚಾನುತಿಷ್ಠತಿ ।**
**ಅನುಧಾವತಿ ಧಾವಂತಂ ಕರ್ಮಪೂರ್ವಕೃತಂ ನರಂ ॥**

ಹಿಂದಣ ಜನ್ಮದ ಕರ್ಮವು ತಾನು ಮಲಗಿದರೆ ಅದೂ ಮಲಗುತ್ತದೆ. ತಾನು ಎದ್ದರೆ ಅದೂ ಎದ್ದು ನಿಲ್ಲುತ್ತದೆ. ತಾನು ಓಡಿದರೆ ಅದೂ ನಮ್ಮ ಬೆನ್ನಟ್ಟಿ ಬರುತ್ತದೆ. ಅದರಿಂದ ತಪ್ಪಿಸಿಕೊಳ್ಳಲು ಯಾರಿಂದಲೂ ಸಾಧ್ಯವಿಲ್ಲ. ಕರ್ಮವು ವಿಧಿಯಾಗಿ ಕಾಡಿ ದಿನಾಂಕ ೧೧-೦೬-೨೦೧೮ಶುಕ್ರವಾರ ಬೆಳಿಗ್ಗೆ ೧೧.೨೫ಕ್ಕೆ ಬಲಿ



ತೆಗೆದುಕೊಂಡಿತಾದರೂ ದಿನಾಂಕ ೦೨-೦೬-೨೦೧೮ ಶನಿವಾರ ಸಂಜೆ ಶಿವನ ಸಾಲ ತೀರಿಸಿ ಪಂಚಭೂತಗಳಲ್ಲಿ ಲೀನವಾದರು.

**'ಎಲೆ ಶಿವನೆ ನಿಮ್ಮಲ್ಲಿ ಸಾಲವಕೊಂಡು**
**ನಿಮ್ಮ ಶರಣ ಶಿವಲೋಕಕ್ಕೆ ಹೋದವನಲ್ಲ**
**ಪೃಥಿವಿಯ ಸಾಲವ ಪೃಥ್ವಿಗೆ ಕೊಟ್ಟು**
**ಅಪ್ಪುವಿನ ಸಾಲವ ಅಪ್ಪುವಿಗೆ ಕೊಟ್ಟು**
**ತೇಜದ ಸಾಲವ ತೇಜಕ್ಕೆ ಕೊಟ್ಟು**
**ವಾಯುವಿನ ಸಾಲವ ವಾಯುವಿಗೆ ಕೊಟ್ಟು**
**ಆಕಾಶದ ಸಾಲವ ಆಕಾಶಕ್ಕೆ ಕೊಟ್ಟು**
**ಪ್ರಸಾದವನಾರಿಗೆಯೂ ಕೊಡಲಿಲ್ಲವೆಂದು**
**ಕೂಡಲಚೆನ್ನಸಂಗಮದೇವರಲ್ಲಿ**
**ಹೂಳಿ ಹೊಕ್ಕ ಶರಣಂಗೆ ನಮೋ ನಮೋ ಎಂಬೆ.'**

**– ಚನ್ನಬಸವಣ್ಣ**

**ಶ್ರೀವಾಣಿ**

**ಜ್ಞಾನಿಗಳ ದೃಷ್ಟಿಯಲ್ಲಿ ನಿದ್ರೆ, ಕಲಹ, ವ್ಯಸನಗಳಲ್ಲಿ ಕಳೆದ ವಯಸ್ಸು ಪರಿಗಣಿತವಲ್ಲ. ಬದುಕಿನಲ್ಲಿ ಸಾರ್ಥಕವಾಗಿ ಸಂದುದೇ ನಿಜವಾದ ವಯಸ್ಸು ಮತ್ತು ಆಯುಸ್ಸು.**





ಶರಣಾಂಜಲಿ

# ಹೆಚ್. ಗಂಗಾಧರನ್ ವಿಧಿವಶ



ಶಿಕ್ಷಣ ತಜ್ಞರಾಗಿ, ಕಾನೂನು ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ, ಪ್ರಾಂಶುಪಾಲರಾಗಿ, ಪತ್ರಕರ್ತರಾಗಿ, ಶಾಸಕರಾಗಿ, ಸಾಹಿತಿಯಾಗಿ ಶ್ರೀ ಮಲೆಯ ಮಹದೇಶ್ವರ ದೇವಸ್ಥಾನ, ಎಡೆಯೂರು ದೇವಸ್ಥಾನ, ಮೈಸೂರಿನ ಚಾಮುಂಡೇಶ್ವರಿ ದೇವಸ್ಥಾನಗಳ ಧರ್ಮದರ್ಶಿಯಾಗಿ ಸೇವೆ ಸಲ್ಲಿಸಿದ್ದ ಶ್ರೀ ಹೆಚ್. ಗಂಗಾಧರನ್ ಅವರು ಮೇ ೨೬ ರಂದು ವಿಧಿವಶರಾದರೆಂದು ತಿಳಿಸಲು ಸಿದ್ಧಗಂಗಾ ವಿಷಾಧಿಸುತ್ತದೆ. ಅವರಿಗೆ ೯೨ ವರ್ಷವಾಗಿತ್ತು.

ತುಮಕೂರು ಜಿಲ್ಲೆ, ಗುಬ್ಬಿ ತಾಲ್ಲೂಕು ಹಿಂಡಿಸಿ ಗ್ರಾಮದಲ್ಲಿ ಜುಲೈ ೨೮, ೧೯೨೬ ರಲ್ಲಿ ಪಟೇಲ್ ಶ್ರೀ ರುದ್ರಪ್ಪ, ಶ್ರೀಮತಿ ನಂಜಮ್ಮ ದಂಪತಿಗಳಿಗೆ ಪುತ್ರರತ್ನರಾಗಿ ಜನಿಸಿದರು. ಶಿಕ್ಷಣವನ್ನು ಹಿಂಡಸಗೆರೆ, ಚಂದ್ರಶೇಖರಪುರ, ಗುಬ್ಬಿ, ಕಡಬ, ತಿಪಟೂರು, ತುಮಕೂರು, ಮೈಸೂರು, ಕಾಶಿಯಲ್ಲಿ ಪ್ರಾಥಮಿಕ, ಮಾಧ್ಯಮಿಕ, ಪ್ರೌಢ ಮತ್ತು ಕಾಲೇಜು ಹಾಗೂ ಸ್ನಾತಕೋತ್ತರ ಶಿಕ್ಷಣವನ್ನು ಮುಗಿಸಿ ಎಂ.ಎ., ಬಿ.ಎಲ್. ಪದವೀಧರರಾದರು. ಪ್ರೌಢಶಾಲಾ ವಿದ್ಯಾಭ್ಯಾಸದ ಅವಧಿಯಲ್ಲಿ ಶ್ರೀ ಸಿದ್ಧಗಂಗಾ ಮಠದ ಆಶ್ರಯದಲ್ಲಿ ಪೂಜ್ಯ ಶ್ರೀ ಉದ್ದಾನ ಶಿವಯೋಗಿಗಳವರ ಮಾರ್ಗದರ್ಶನ ಹಾಗೂ ಆಶೀರ್ವಾದದ ಬೆಳಕಿನಲ್ಲಿ ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಂಡರು. ಪೂಜ್ಯ ಶ್ರೀ ಉದ್ದಾನ ಶಿವಯೋಗಿಗಳ ಕಾಯಕ ನಿಷ್ಠೆ, ಮಾಡುವ ಕೆಲಸದಲ್ಲಿ ಶ್ರದ್ಧೆಯಿಂದ ಪ್ರಭಾವಿತರಾದ ಶ್ರೀಯುತರು ಅವರ ಆದರ್ಶಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಮುನ್ನಡೆದರು. ವಿದ್ಯಾರ್ಥಿ ದೆಸೆಯಿಂದಲೇ ಚರ್ಚಾಪಟುವಾಗಿ, ಉತ್ತಮ ವಾಗ್ಮಿಗಳಾಗಿ ರೂಪುಗೊಂಡರು. ಶ್ರೀಯುತರಾದ ಜಯಪ್ರಕಾಶ್ ನಾರಾಯಣ್, ಅಶೋಕ್ ಮೆಹ್ತಾ, ಅಚ್ಯುತ್ ಪಟವರ್ಧನ್, ಡಾ. ರಾಮ ಮನೋಹರ್ ಲೋಹಿಯಾ, ಎಸ್. ನಿಜಲಿಂಗಪ್ಪರಂಥವರ ಪ್ರಭಾವಕ್ಕೆ ಒಳಗಾಗಿ ಸಾಮಾಜಿಕ ಸೇವೆಯಲ್ಲಿ ತೊಡಗಿಸಿಕೊಂಡರು.

ನ್ಯಾಯವಾದಿಗಳಾಗಿ ವೃತ್ತಿ ಜೀವನ ಪ್ರಾರಂಭಿಸಿದ ಶ್ರೀಯುತರು ಪತ್ರಿಕೋದ್ಯಮಿಯಾಗಿ, ಮೈಸೂರು ಪ್ರಭ-ಆದರ್ಶ ಪತ್ರಿಕೆಯ ಸಂಪಾದಕರಾಗಿ ಸೇವೆ ಸಲ್ಲಿಸಿದ್ದರು. ಜೆ.ಎಸ್.ಎಸ್. ವಾಣಿಜ್ಯ ಕಾಲೇಜು, ಕಾನೂನು ಕಾಲೇಜುಗಳಲ್ಲಿ ಪ್ರಾಧ್ಯಾಪಕರಾಗಿ, ಪ್ರಾಚಾರ್ಯರಾಗಿ ಸೇವೆ ಸಲ್ಲಿಸಿದ್ದ ಹೆಚ್. ಗಂಗಾಧರನ್ ಅವರು ಜೆ.ಎಸ್.ಎಸ್. ಮಹಾವಿದ್ಯಾಪೀಠ ಪ್ರತಿಷ್ಠಾನದ ಆಜೀವ ಸದಸ್ಯರಾಗಿದ್ದರು. ಕಾರ್ಮಿಕ ಸಂಘಗಳು, ಸಾಹಿತ್ಯ ಮತ್ತು ಸಾಂಸ್ಕೃತಿಕ ಸಂಘಟನೆಗಳ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದರು. ಕೃಷ್ಣರಾಜ ವಿಧಾನಸಭಾ ಕ್ಷೇತ್ರದಿಂದ ಬಿಜೆಪಿ ಅಭ್ಯರ್ಥಿಯಾಗಿ ಸ್ಪರ್ಧಿಸಿ ೧೯೭೮ ಮತ್ತು ೧೯೮೩ ರಲ್ಲಿ ಆಯ್ಕೆಯಾಗಿ ವಿಧಾನಸಭೆಯನ್ನು ಪ್ರವೇಶಿಸಿ ಉತ್ತಮ ವಾಗ್ಮಿ ಎಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದರು.

ಸಾಹಿತ್ಯ ಕ್ಷೇತ್ರದಲ್ಲಿಯೂ ಗಣನೀಯ ಸೇವೆ ಸಲ್ಲಿಸಿರುವ ಹೆಚ್. ಗಂಗಾಧರನ್ ಅವರು ಶರಣಪ್ರಕಾಶ, ಮುಕ್ತಾಯಕ್ಕನ ಮುಕ್ತಿ ದರ್ಶನ, ಮಹಾಜ್ಯೋತಿ ಚನ್ನಬಸವಣ್ಣ, ಮಂತ್ರ ಮಹರ್ಷಿ, ನಿಜಗುಣ ಶಿವಯೋಗಿ, ಧರ್ಮಪದ, ಚಾಮುಂಡೇಶ್ವರಿ ಮಹಿಮೆ, ಗೋಸಲೇಶ್ವರ ಗುರು ಪರಂಪರೆ, ಬಸವಪ್ರಭ, ವೀರಶೈವ ವಿಚಾರಧಾರೆ, ಶ್ರೀ ಶಿವರಾತ್ರೀಶ್ವರ ಶತಕ, ಮಹಾನಂದಿ ಮಹಿಮೆ, ಗೌರಿಶಂಕರ ಸ್ವಾಮಿಗಳು, ಇತ್ಯಾದಿ ೨೫ಕ್ಕೂ ಹೆಚ್ಚು ಕೃತಿಗಳನ್ನು, ೩೦೦ಕ್ಕೂ ಹೆಚ್ಚು ಸಂಶೋಧನಾ ಲೇಖನಗಳನ್ನು ಲೋಕಾರ್ಪಣೆ ಮಾಡಿ ಸಾಹಿತ್ಯ ಸಾರಸ್ವತ ಕ್ಷೇತ್ರಕ್ಕೆ ತಮ್ಮದೇ ಆದ ಕಾಣಿಕೆ ನೀಡಿದ್ದಾರೆ.

ಶ್ರೀ ಗಂಗಾಧರನ್ ಅವರು ಸಾಹಿತ್ಯ, ಧಾರ್ಮಿಕ ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲಿ ಸಲ್ಲಿಸಿದ ಅನುಪಮ ಸೇವೆಗಾಗಿ ಶ್ರೀ ನಿಡುಮಾಮಿಡಿ ಜಗದ್ಗುರುಗಳಿಂದ **'ಶೈವದರ್ಶನ ಸುಧಾಕರ'**, ಶ್ರೀಶೈಲ ಪೀಠಾಧ್ಯಕ್ಷರಾಗಿದ್ದ ಜಗದ್ಗುರು ವಾಗೀಶ ಶಿವಾಚಾರ್ಯ ಸ್ವಾಮಿಗಳವರಿಂದ **'ವ್ಯಾಖ್ಯಾನ ಬೃಹಸ್ಪತಿ'**, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಶ್ರೀ ಸಿದ್ಧಗಂಗಾ ಮಠದಿಂದ **'ಗೋಸಲಶ್ರೀ'** ಪ್ರಶಸ್ತಿಯೂ ಸೇರಿದಂತೆ ಅನೇಕ ಪ್ರಶಸ್ತಿಗಳಿಗೆ ಭಾಜನರಾಗಿದ್ದರು.

ಸುತ್ತೂರು ಶ್ರೀಕ್ಷೇತ್ರದ ಸೇವೆಯಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದ ಶ್ರೀಯುತರು ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರೊಡನೆ ಅಮೆರಿಕಾ, ಇಂಗ್ಲೆಂಡ್, ಫ್ರಾನ್ಸ್, ಜರ್ಮನಿ ಮುಂತಾದ ದೇಶಗಳಲ್ಲಿ ಪ್ರವಾಸ ಮಾಡಿ, ಹೋದ ಕಡೆಗಳಲ್ಲಿ ಶರಣ ಸಂಸ್ಕೃತಿ ಹಾಗೂ ಭಾರತೀಯ ಸಂಸ್ಕೃತಿಯನ್ನು ಕುರಿತು ಪ್ರವಚನ ನೀಡಿ ಪ್ರೀತಿ, ಗೌರವಗಳಿಗೆ ಪಾತ್ರರಾಗಿದ್ದರು.

ಶ್ರೀ ಸಿದ್ಧಗಂಗಾ ಕ್ಷೇತ್ರ ಹಾಗೂ ತ್ರಿವಿಧ ದಾಸೋಹಿ, ಕರ್ನಾಟಕ ರತ್ನ, ಪದ್ಮಭೂಷಣ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಬಗ್ಗೆ ಅಪಾರವಾದ ಭಕ್ತಿ, ಗೌರವವನ್ನಿಟ್ಟುಕೊಂಡು, ಗುರುಕೃಪೆಗೆ ಪಾತ್ರರಾಗಿದ್ದರು. ಶ್ರೀ ಸಿದ್ಧಗಂಗಾ ಜಾತ್ರಾ ಮಹೋತ್ಸವದಲ್ಲಿ ಶ್ರೀ ಗೋಸಲ ಸಿದ್ಧೇಶ್ವರಸ್ವಾಮಿ ಉತ್ಸವಕ್ಕೆ ಕಾರಣರಾಗಿ-ಸೇವಾಕರ್ತರಾಗಿದ್ದರು. ಸಿದ್ಧಗಂಗಾ ಮಾಸಪತ್ರಿಕೆ ಹಾಗೂ ವಿವಿಧ ಸಂದರ್ಭಗಳಲ್ಲಿ ಹೊರತಂದ ಸ್ಮರಣ ಸಂಪುಟಗಳಿಗೆ ಮೌಲಿಕವಾದ ಲೇಖನಗಳನ್ನು ನೀಡಿ, ಪತ್ರಿಕೆಯ ಹಾಗೂ ಸಂಪುಟಗಳ ಮೌಲ್ಯವನ್ನು ಹೆಚ್ಚಿಸಿದ್ದರು. ಅವರ ಆತ್ಮಕ್ಕೆ ಚಿರಶಾಂತಿಯನ್ನು ಅವರ ಕುಟುಂಬ ವರ್ಗಕ್ಕೆ ಹಾಗೂ ಅವರ ಅಭಿಮಾನಿಗಳಿಗೆ, ಬಂಧುಗಳಿಗೆ ಅವರ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ಶ್ರೀ ಸಿದ್ಧಗಂಗಾ ಗುರುಪರಂಪರೆ ದಯಪಾಲಿಸಲಿ ಎಂದು ಸಿದ್ಧಗಂಗಾ ಪ್ರಾರ್ಥಿಸುತ್ತದೆ.

ಶ್ರೀಯುತರ ಅಂತ್ಯ ಸಂಸ್ಕಾರ ಸಂದರ್ಭದಲ್ಲಿ ಸುತ್ತೂರು ಜಗದ್ಗುರು ಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು, ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು, ಪರಮಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರು ಸೇರಿದಂತೆ ವಿವಿಧ ಮಠಗಳ ಹರಗುರು ಚರಮೂರ್ತಿಗಳು, ಸಮಾಜದ ಮುಖಂಡರು, ಗಣ್ಯರು ಭಾಗವಹಿಸಿದ್ದರು.





ಶರಣಾಂಜಲಿ



## ಶ್ರೀ ಬಸವರಾಜ ಕಣಜಿ

ಶ್ರೀಮಠದ ಅನನ್ಯ ಭಕ್ತರೂ, ಉದಾರ ಕೊಡುಗೈ ದಾನಿಗಳೂ ಆಗಿದ್ದ ಶ್ರೀ ಬಸವರಾಜ ಕಣಜಿಯವರು ದಿನಾಂಕ ೧೩-೦೬-೨೦೧೮ ರಂದು ಲಿಂಗದೊಳಗಾದರು. ಪರಮಪೂಜ್ಯ ಶ್ರೀ ಶ್ರೀಗಳವರ ಶಿವಚರಣಾರಾಧಕರಾಗಿ, ಪೂಜ್ಯಪಾದರ ಶತಮಾನೋತ್ಸವ ಸಂದರ್ಭದಲ್ಲಿ ಪ್ರಕಟಿಸ ಲಾದ ೧೦೮ ಗ್ರಂಥಗಳ ದಾಸೋಹಿಗಳಾಗಿ ಹದಿನೆಂಟು ಲಕ್ಷ ರೂಗಳನ್ನು ನೀಡಿದ್ದ ಶ್ರೀ ಕಣಜಿಯವರು ರಾಜ್ಯ ಸರ್ಕಾರದಲ್ಲಿ ಅಬಕಾರಿ ಇಲಾಖೆಯಲ್ಲಿ ಸಹನಿರ್ದೇಶಕರಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದರು. ಶ್ರೀಮತಿ ಲಲಿತಾ ಕಣಜಿಯವರನ್ನು ಬಾಳಸಂಗಾತಿಯಾಗಿ ಸ್ವೀಕರಿಸಿ ಮಗಳು ಮತ್ತು ಮಗನನ್ನು ಪಡೆದಿದ್ದ ಆದರ್ಶ ತಂದೆಯಾಗಿದ್ದರು. ಸದುವಿನಯ, ಮೃದು ವಚನಗಳಿಗೆ ಮತ್ತೊಂದು ಹೆಸರು ಶ್ರೀ ಕಣಜಿಯವರು. ಶ್ರೀಯುತರ ಪಾರ್ಥಿವ ಶರೀರವನ್ನು ಅವರ ಜನ್ಮಸ್ಥಳದಲ್ಲಿ ಅಂತ್ಯಸಂಸ್ಕಾರ ನೆರವೇರಿಸಲಾಯಿತು.

ಶ್ರೀ ಕಣಜಿಯವರ ಆತ್ಮಕ್ಕೆ ಶ್ರೀ ಸಿದ್ಧಗಂಗಾ ಗುರುಪರಂಪರೆ ಸಕಲ ಸನ್ಮಂಗಳವನ್ನು ಅನುಗ್ರಹಿಸಲಿ ಎಂದು ಆಶಿಸುತ್ತ, ದಿವಂಗತರ ಕುಟುಂಬ ವರ್ಗದವರಿಗೆ ಶ್ರೀಯುತರ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ನೀಡಲಿ ಎಂದು **'ಸಿದ್ಧಗಂಗಾ'** ಪ್ರಾರ್ಥಿಸುತ್ತದೆ.

ಲೇಖನ

# ಒಕ್ಕಲಿಗ ಮುದ್ದಣ್ಣ

– ಆರ್.ಎಚ್. ಚಾಪಗಾವಿ *

ಈ ಜಗತ್ತು ಸ್ಥಿರವಾಗಿಲ್ಲ. ಅದು ಚಲನಶೀಲವಾಗಿದೆ. ಚಲನಶೀಲತೆಯೇ ಅದರ ಲಕ್ಷಣವಾಗಿದೆ. ಕಾಲವು ಚಲಿಸಿದಂತೆ ಪ್ರಪಂಚದ ಎಲ್ಲ ವಸ್ತುಗಳು ಬದಲಾವಣೆ ಹೊಂದುತ್ತ ಹೋಗುತ್ತವೆ. ದಿನಗಳೆದಂತೆ ಈ ದೇಹವು ಕೂಡ ಬಾಲ್ಯ, ಯೌವ್ವನ, ವೃದ್ಧಾಪ್ಯ ಮೊದಲಾದ ಅವಸ್ಥೆಗಳನ್ನು ಹೊಂದಿ ಕಡೆಗೆ ಒಂದು ದಿನ ಮರೆಯಾಗಿ ಹೋಗುತ್ತದೆ. ಆದರೆ ಇರುವಷ್ಟು ದಿನ ಚೆನ್ನಾಗಿ ಬಾಳಿ ಬದುಕುವುದೇ ಜೀವನದ ಗುರಿಯಾಗಿರಬೇಕು. ಪ್ರಾಪಂಚಿಕ ವಿಷಯಗಳಲ್ಲಿನ ವ್ಯಾಮೋಹ ಅಳಿದು ಎಲ್ಲರೂ ಹೌದೆನ್ನುವಂತೆ ಬಾಳನ್ನು ರೂಪಿಸಿಕೊಳ್ಳಬೇಕು. 'ಲೇಸೆನಿಸಿಕೊಂಡು ಒಂದು ದಿನ ಬದುಕಿದ್ದರೆ ಸಾಲದೇ?' ಎಂಬ ಶರಣರ ವಾಣಿಯಂತೆ ಲೇಸೆನಿಸಿಕೊಂಡು ಬದುಕಲು ಕಲಿಯಬೇಕು. ಶರಣರು ಸಂತರು ಜ್ಞಾನಿಗಳು ಹೀಗೆ ಬಾಳಿ ಬದುಕಿ ತಮ್ಮ ಜೀವನ ಸಾರ್ಥಕ ಮಾಡಿಕೊಂಡಿದ್ದಾರೆ. ಅಂಥ ಶರಣರಲ್ಲಿ ಹನ್ನೆರಡನೆಯ ಶತಮಾನದಲ್ಲಿ ಆಗಿ ಹೋದ ಒಕ್ಕಲಿಗ ಮುದ್ದಣ್ಣನು ಒಬ್ಬನಾಗಿದ್ದಾನೆ. ಮಣ್ಣಲ್ಲಿ ಮಣ್ಣಾಗಿ ದುಡಿದು ಪ್ರಾಪಂಚಿಕ ವಿಷಯಗಳ ವ್ಯಾಮೋಹ ಅಳಿದು ಚಿನ್ನದಂತಹ ಬದುಕು ಕಟ್ಟಿಕೊಂಡ ಮುದ್ದಣ್ಣನು ಒಬ್ಬ ಆದರ್ಶ ಶರಣನು. ಹೆಚ್ಚು ಓದಿಕೊಂಡವನಲ್ಲದಿದ್ದರೂ ಜೀವನ ಎಂದರೇನು ಏಕೆ ಜೀವಿಸಬೇಕು? ಹೇಗೆ ಜೀವಿಸಬೇಕು? ಎಂಬ ಪರಮಸತ್ಯವನ್ನು ಅರಿತು ಆಚರಿಸಿ ಆನಂದಿಸಿದವನು.

ಒಕ್ಕಲಿಗ ಮುದ್ದಣ್ಣನ ಚರಿತ್ರೆ ವಿಷಯಗಳು ವಿಶೇಷವಾಗಿ ತಿಳಿದು ಬಂದಿರುವುದಿಲ್ಲ. ಇವನ ಹುಟ್ಟೂರು ಜೋಳದ ಹಾಳ ಎಂದಿದ್ದು ಈತನು ಒಕ್ಕಲುತನ ಕಾಯಕವನ್ನು ಮಾಡಿಕೊಂಡಿದ್ದು ಗುರು ಲಿಂಗ ಜಂಗಮ ಸೇವೆಯಲ್ಲಿ ಹೆಚ್ಚಿನ ಸಮಯ ಕಳೆಯುತ್ತಿದ್ದನು. ಇವನಿಗೆ ಮುಗುದಯ್ಯ ಮುಗ್ಧಯ್ಯ ಎಂದು ಕರೆಯುತ್ತಿದ್ದರು. **'ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರ'** ಕಾವ್ಯದಲ್ಲಿ ಹಾಗು ಡಾ. ಫ.ಗು. ಹಳಕಟ್ಟಿಯವರ **'ಅಮರ ಗಣಾಧೀಶ್ವರ ಚರಿತ್ರೆ'**ಯಲ್ಲಿ ಮುದ್ದಣ್ಣನ ವಿಷಯ ಉಲ್ಲೇಖವಾಗಿದೆ. ಮುದ್ದಣ್ಣನು ಒಬ್ಬ ಆದರ್ಶ ರೈತನಾಗಿದ್ದು ಹದಿನೆಂಟು ತರದ ಧಾನ್ಯಗಳನ್ನು ಬೆಳೆದು ರಾಜನಿಗೆ ಸಲ್ಲಬೇಕಾದ ತೆರಿಗೆಯನ್ನು ಸರಿಯಾಗಿ ಸಲ್ಲಿಸುತ್ತ ದಾಸೋಹ ಸೇವೆ ಮಾಡುತ್ತ ಲೌಕಿಕ ಸುಖಿ ಜೀವನ ನಡೆಸುತ್ತಿದ್ದನು. ಗುರು ಕಾರುಣ್ಯ ಪಡೆದು ಶಿವಭಕ್ತಿಯನ್ನು ಮಾಡಿಕೊಂಡು ಜ್ಞಾನವನ್ನು ಸಂಪಾದಿಸಿ ಜೀವನ್ಮುಕ್ತಿ ಪಡೆದುಕೊಳ್ಳಬೇಕೆಂಬ ಹಂಬಲ ಇವನನ್ನು ಕಾಡುತ್ತಿತ್ತು. ಒಂದು ದಿನ ಉಳುಮೆಯಲ್ಲಿ ನಿರತನಾಗಿದ್ದಾಗ ನೇಗಿಲ ಮೊನೆಗೆ ಏನೋ ತಗುಲಿ ತಡೆಯುಂಟಾಗುತ್ತದೆ. ಅಲ್ಲಿ ಅಗಿದು ನೋಡಲು ಸ್ವಯಂಭು ಲಿಂಗವೊಂದು ಗೋಚರಿಸುತ್ತದೆ. ಆ ಲಿಂಗವನ್ನು ಕಂಡು ಸಂತಸ ಪಟ್ಟ ಮುದ್ದಣ್ಣನು ಅದಕ್ಕೆ ಆದಿನಾಥ ಲಿಂಗವೆಂದು ಹೆಸರಿಟ್ಟು ಕರೆದು ಭಕ್ತಿಯಿಂದ ಪೂಜಾಭಿಷೇಕ ಮಾಡಿ ತುಂಬೆಯ ಹೂವು ಏರಿಸಿ ಜೋಳದಂಬಕ

* ೬೪೪ ರಾಮತೀರ್ಥ ನಗರ, ಬೆಳಗಾವಿ



ನೈವೇದ್ಯ ಮಾಡಿಟ್ಟು ತಾನು ಲಿಂಗಧ್ಯಾನದಲ್ಲಿ ತಲ್ಲೀನನಾಗಿ ಅಲ್ಲಿಯೇ ಕಕ್ಕೆ ಮರದಡಿ ನಿದ್ರೆ ಹೋಗುತ್ತಾನೆ. ಆಗ ಆ ಸ್ವಯಂಭುಲಿಂಗವೇ ಜಂಗಮರೂಪವಾಗಿ ಬಂದು ಮುದ್ದಣ್ಣನನ್ನು ಎಬ್ಬಿಸಿ ದೀಕ್ಷೆಯನ್ನು ಕರುಣಿಸಿ ಲಿಂಗಾಚಾರ ಬೋಧನೆ ಮಾಡಿ ಅದೃಶ್ಯನಾಗಿ ಬಿಡುತ್ತಾನೆ. ಈ ಘಟನೆಯಿಂದ ಅತ್ಯಂತ ಪುಳಕಿತನಾದ ಮುದ್ದಣ್ಣನು ಲಿಂಗಾಚಾರ ಸಂಪನ್ನನಾಗಿ ಸತ್ಯಶುದ್ಧ ಕಾಯಕ ಮಾಡಿಕೊಂಡು ಹೆಚ್ಚಿನ ಅಧ್ಯಾತ್ಮ ಸಾಧನೆಯಲ್ಲಿ ತನ್ನನ್ನು ತೊಡಗಿಸಿಕೊಳ್ಳುತ್ತಾನೆ. ಮುದ್ದಣ್ಣನ ಈ ಪ್ರಸಂಗವು ಭೈರವೇಶ್ವರ ಕಾವ್ಯದಲ್ಲಿ ಸೊಗಸಾಗಿ ಮೂಡಿಬಂದಿದೆ.

ಅನೇಕ ಶರಣರು ರಾಜಶಾಹಿಯನ್ನು ಧಿಕ್ಕರಿಸಿದ ಪ್ರಸಂಗಗಳು ಕಾಣಬರುತ್ತವೆ. ಅಂಥ ಒಂದು ಪ್ರಸಂಗ ಮುದ್ದಣ್ಣನಿಗೂ ಎದುರಾಗುತ್ತದೆ. ಭೂ ಕಂದಾಯ ವಿಷಯದಲ್ಲಿ ಮುದ್ದಣ್ಣನಿಗೂ ರಾಜನ ಅಧಿಕಾರಿಗಳಿಗೂ ವಾದ ವಿವಾದಗಳು ನಡೆಯುತ್ತವೆ. ನಿಗದಿತ ದರಕ್ಕಿಂತ ಹೆಚ್ಚಿನ ತೆರಿಗೆ ಕೊಡದೆ ಆ ಹಣವನ್ನು ದಾಸೋಹಕ್ಕೆ ವಿನಿಯೋಗಿಸಿದನು. ತೆರಿಗೆಯ ವಿಷಯದಲ್ಲಿ ತನ್ನ ಪ್ರಾಮಾಣಿಕತೆಗೆ ಲಿಂಗದೇವನನ್ನೇ ಸಾಕ್ಷಿಯಾಗಿಸಿದ್ದಾನೆ. ಲಿಂಗದೇವನು ತನಗೆ ವಿಧಿಸುವ ತೆರಿಗೆಗೆ ತನ್ನ ಮನವೆಂಬ ಧನವನ್ನು ಕೊಟ್ಟು (ಅಧ್ಯಾತ್ಮ ಸಾಧನೆ ಮಾಡಿ) ತೀರಿಸುವೆನೆನ್ನುತ್ತಾನೆ. ಪ್ರಭು ಅಲ್ಲಮರ ನೇತೃತ್ವದಲ್ಲಿ ಬಸವಣ್ಣನವರ ಮಾರ್ಗದರ್ಶನದಲ್ಲಿ ಮತ್ತು ಚನ್ನಬಸವಣ್ಣನವರ ವ್ಯವಸ್ಥಾಪನೆಯಲ್ಲಿ ನಡೆಯುತ್ತಿದ್ದ ಅನುಭವ ಮಂಟಪದ ಸತ್ಸಂಗದಲ್ಲಿ ಪಾಲ್ಗೊಂಡು ಮುದ್ದಣ್ಣ ತನ್ನ ವ್ಯಕ್ತಿತ್ವವನ್ನು ಉಜ್ವಲಗೊಳಿಸಿಕೊಳ್ಳುತ್ತಾನೆ. ವಚನಗಳನ್ನು ರಚನೆ ಮಾಡಿ ಅನುಭಾವಿ ವಚನಕಾರನಾಗಿ ಶೋಭಿಸಿದ ಮುದ್ದಣ್ಣನ ಹನ್ನೆರಡು ವಚನಗಳು ಮಾತ್ರ ದೊರಕಿದ್ದು ಅವು ಸಂಕೀರ್ಣ ವಚನ ಸಂಪುಟದಲ್ಲಿ ಪ್ರಕಟವಾಗಿವೆ. **'ಕಾಮಭೀಮ ಜೀವಧನದೊಡೆಯ'** ಈತನ ವಚನಾಂಕಿತವಾಗಿದೆ.

**ಅಂಗವೆ ಭೂಮಿಯಾಗಿ ಲಿಂಗವೆ ಬೆಳೆಯಾಗಿ**
**ವಿಶ್ವಾಸವೆಂಬ ಬತ್ತ ಒಲಿದು ಉಂಡು**
**ಸುಖಿಯಾಗಿರಬೇಕೆಂದ ಕಾಮಭೀಮ ಜೀವಧನದೊಡೆಯ.**

ಲೌಕಿಕ ಸಿರಿ ಸಂಪತ್ತು, ಧನ ಕನಕ ಅಧಿಕಾರ ಅಂತಸ್ತುಗಳು ಬದುಕಿನ ಗುರಿಯಲ್ಲ. ಈ ಕ್ಷಣಿಕ ಸುಖಗಳ ವ್ಯಾಮೋಹ ಅಳಿದು ಆತ್ಮಜ್ಞಾನವೆಂಬ ಬೆಳೆ ಬೆಳೆದು ಪರಮಸತ್ಯ ಪರಮಾತ್ಮನ ಸಾಕ್ಷಾತ್ಕಾರ ಹೊಂದಿ ನಿಜ ಸುಖ ಪಡೆಯಬೇಕೆಂದು ಒಕ್ಕಲಿಗ ಮುದ್ದಣ್ಣ ಬೋಧಿಸಿದ್ದಾನೆ.

**ಭಕ್ತಿಯೆಂಬ ಪೃಥ್ವಿಯಲ್ಲಿ ಗುರೂಪದೇಶವೆಂಬ ನೇಗಿಲು ಪಿಡಿದು**
**ಅಂತಃಕರಣ ಚತುಷ್ಟಯವೆಂಬ ಪಶುವಂ ಕಟ್ಟಿ**
**ಓಂಕಾರ ನಾದವೆಂಬ ಸೆಳೆಕೋಲಂ ಪಿಡಿದು**
**ಉತ್ತರ ಕ್ರೀಯೆಂಬ ಸಾಲನೆತ್ತಿ**
...... ..............................
**ಸುಖಿಯಾಗಿಪ್ಪ ಒಕ್ಕಲುಮಗನ ತೋರಿ ಬದುಕಿಸಯ್ಯಾ.**

ತನ್ನ ಕಾಯಕಕ್ಕೆ ಸಂಬಂಧಿಸಿದ ಪರಿಕರಗಳನ್ನು ಕ್ರಿಯೆಗಳನ್ನು ಉದಾಹರಿಸಿ ಜೀವನ್ಮುಕ್ತಿ ಸಾಧಿಸುವ ಆತ್ಮತತ್ತ್ವಗಳನ್ನು ಮುದ್ದಣ್ಣನು ಬೆಡಗಿನ ರೂಪದಲ್ಲಿ ಸರಳವಾಗಿ ಸುಂದರವಾಗಿ ತಿಳಿಸಿದ್ದಾನೆ.

**ವೇದಶಾಸ್ತ್ರನೋದುವದಕ್ಕೆ ಹಾರುವನಲ್ಲ**
**ಇರಿದು ಮೆರೆವುದಕ್ಕೆ ಕ್ಷತ್ರಿಯನಲ್ಲ**
**ವ್ಯವಹರಿಸುವುದಕ್ಕೆ ವೈಶ್ಯನಲ್ಲ**
**ಉಳುವ ಒಕ್ಕಲುಮಗನ ತಪ್ಪ ನೋಡದೆ ಒಪ್ಪುಗೊಳ್ಳಯ್ಯಾ.**

ನಾನು ಕೇವಲ ನಿನ್ನನ್ನು ಅರಿಯುವ ಲಿಂಗ ಬೆಳೆ ಬೆಳೆದುಕೊಳ್ಳಲು ವ್ಯವಸಾಯ ಮಾಡುತ್ತಿರುವ ಅಮಾಯಕ ಒಕ್ಕಲು ಮಗನಾಗಿದ್ದೇನೆ. ನನ್ನ ಸಾಧನೆಯಲ್ಲಿ ತಪ್ಪಿದ್ದರೆ ಕ್ಷಮಿಸಿ ನನ್ನನ್ನು ಒಪ್ಪಿಕೊ ಎಂದು ಉಪಮೆಗಳ ಮೂಲಕ ಅಂಜಲಿಬದ್ಧನಾಗಿ ದೇವರಿಗೆ ಮೊರೆ ಇಟ್ಟಿದ್ದಾನೆ.

ನಡೆ ನುಡಿ ಒಂದಾಗಿದ್ದ ಅನುಭಾವಿ ಶರಣ ಒಕ್ಕಲಿಗ ಮುದ್ದಣ್ಣ ಗುರುಲಿಂಗ ಜಂಗಮ ಪ್ರೇಮಿಯಾಗಿ, ದಾಸೋಹ ಸಂಪನ್ನನಾಗಿ ಕಾಯಕದ ಕಲಿಯಾಗಿ ಬಾಳಿ ಬದುಕಿದರು. ಸತ್ಯಶುದ್ಧ ಆಚರಣೆ, ನಿಷ್ಠೆ ನಿಸ್ವಾರ್ಥ ಬುದ್ಧಿಯಿಂದ ಕಾಯಕಕ್ಕೆ ಪಾವಿತ್ರ್ಯ ತಂದುಕೊಟ್ಟನು. ಅವನು ಕೇವಲ ಬಹಿರಂಗ ಕೃಷಿ ಪಂಡಿತನಾಗಿರದೆ ಅಂತರಂಗ ಕೃಷಿ ವಿಜ್ಞಾನಿಯೂ ಆಗಿದ್ದನು. ಹೃದಯವೆಂಬ ಹೊಲದಲ್ಲಿ ಮಾನವೀಯ ಮೌಲ್ಯಗಳನ್ನು ಬಿತ್ತಿ ಬೆಳೆದು ಸಹಜೀವಿಗಳಿಗೆ ಉಣಬಡಿಸಿದ ಮಹಾನುಭಾವಿಯಾಗಿದ್ದನು. 'ಮಾಡುವ ಮಾಟದಿಂದ ಮತ್ತೊಂದನರಿಯ ಬೇಕು' ಎಂದು ಅಲ್ಲಮರು ಹೇಳಿದಂತೆ, ಮುದ್ದಣ್ಣನು ಲೌಕಿಕ ಕಾಯಕ ಮಾಡಿಕೊಂಡು ಅಲೌಕಿಕ ಸಾಧನೆ ಮಾಡಿ ಇಹದಲ್ಲಿ ಪರವನ್ನು ಸಾಧಿಸಿದ ಧೀಮಂತನಾಗಿದ್ದಾನೆ. ಬೀದರ ಜಿಲ್ಲೆ ನಾರಾಯಣಪುರದ ಕೆರೆಯ ಏರಿಯ ಕೆಳಗಡೆ ಮುದ್ದಣ್ಣನ ಸಮಾಧಿ ಗದ್ದುಗೆ ಇರುವ ಗುಡಿಯಿದೆ. ಅಲ್ಲಿ ನಿತ್ಯ ಪೂಜೆ ನಡೆಯುತ್ತಿದ್ದು ಆಷಾಢ ಶ್ರಾವಣಗಳಲ್ಲಿ ದಾಸೋಹ ನಡೆಸುತ್ತಾರೆ. ಪ್ರತಿ ವರ್ಷ ಎಳ್ಳ ಆಮಾವಾಸ್ಯೆಯ ದಿನ ದಂದು ಒಕ್ಕಲಿಗ ಮುದ್ದಣ್ಣನ ಜಯಂತಿಯನ್ನು ಆಚರಿಸುತ್ತಾರೆ.





ಚಿಂತನೆ

# ಮನಸ್ಸು

– ಶ್ರೀ ಶ್ರೀ ಶಾಂತಮಲ್ಲಿಕಾರ್ಜುನ ಸ್ವಾಮಿಗಳು *

'ಮನಯೇವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೋಃ' ಎಂಬ ಉಪನಿಷತ್ಕಾರರ ಮಾತನ್ನು ನಾವುಗಳು ಪದೇ ಪದೇ ಉದಹರಿಸುವುದುಂಟು. ಪ್ರತಿಯೊಬ್ಬ ಮನುಷ್ಯನು ಒಂದಿಲ್ಲೊಂದು ಹಂತದಲ್ಲಿ ಮನಸ್ಸಿನ ತಳಮಳವನ್ನನು ಭವಿಸುವ ಜೊತೆಗೆ ಚಿಂತಾಕ್ರಾಂತನಾಗಿರುತ್ತಾನೆ. ಅದಕ್ಕಾಗಿ ಶರಣರು ಮನಸ್ಸನ್ನು ಮರ್ಕಟನಿಗೆ ಹೋಲಿಸಿರುವುದನ್ನು ನಾವು ಕಾಣುತ್ತೇವೆ. ಓರ್ವ ಸಂತ ಮನಸ್ಸನ್ನು ನಾಯಿಮರಿಗೆ ಹೋಲಿಕೆ ಮಾಡುತ್ತಾರೆ. ನಾವು ಸಾಕಿದ ನಾಯಿಮರಿ ಕೂಡ ಕುಣಿದ ಕುಪ್ಪಳಿಸಿ ನಮ್ಮ ಸುತ್ತು ಪ್ರದಕ್ಷಿಣೆ ಹಾಕಿ ಕೊನೆಗೆ ನಮ್ಮ ಕಾಲ ಬಳಿ ತೆಪ್ಪಗೆ ಬಂದು ಮಲಗುತ್ತದೆ. ಆಗ ಅದು ನಮಗೆ ಶರಣು ಹೋಗಿರುತ್ತದೆ. ಮನಸ್ಸು ಕೂಡ ಹಾಗೆಯೇ. ಅದು ಕುಣಿದು, ಓಡಿ ಹಾರಾಡಲು ಬಿಡಿ. ನಂತರ ಮನಸ್ಸು ಓಡುತ್ತಿರುವ ದಿಕ್ಕನ್ನು ಬದಲಾಯಿಸಲು ಪ್ರಯತ್ನಿಸಿ. ಆತ್ಮಚೈತನ್ಯವು ನಮ್ಮ ಹೃದಯದಲ್ಲಿ ಬೆಳಗುತ್ತಿರುವುದರಿಂದಲೇ ನಮ್ಮ ಮನಸ್ಸು ಎಲ್ಲದರಲ್ಲಿಯೂ ಪ್ರವೃತ್ತವಾಗುತ್ತದೆ ಎಂಬುದನ್ನು ಗಮನದಲ್ಲಿಡಬೇಕು. ವಿಜಯದ ಆಸೆ, ಭೋಗವಸ್ತುಗಳ ಸಂಗ್ರಹಣೆ, ಇಂದ್ರಿಯ ಲೋಲುಪತೆ, ಲೋಕ ವಿಷಯಗಳಲ್ಲಿ ಮಮತೆ, ಇವೆಲ್ಲವೂ ನಮ್ಮ ಅಹಂಕಾರದ ಕ್ರಿಯೆಗಳು. ಇವನ್ನು ಅಷ್ಟು ಸುಲಭವಾಗಿ ಹೋಗಲಾಡಿಸಲು ಸಾಧ್ಯವಿಲ್ಲ. ಬೆಳಗಾಗುವುದರಲ್ಲಿ ಇವು ಮಾಯವಾಗುವಂತಹವೂ ಅಲ್ಲ. ಹಳೆಯ ಅಭ್ಯಾಸದಿಂದ ಮನಸ್ಸು ಮಾಡುವ ತಪ್ಪುಗಳನ್ನು ನೋಡಿ, ಮರುಗಿ, ಅದನ್ನು ಮನ್ನಿಸಿ, ಪರಮಾತ್ಮನ ಕಡೆಗೆ ಮನಸ್ಸನ್ನು ಸಾಧ್ಯವಾದಷ್ಟು ತಿರುಗಿಸಬೇಕು. ಅವನ ಅನುಗ್ರಹದಿಂದ ಎಲ್ಲವೂ ಸುಲಭವಾಗುವುದು.

ನಮ್ಮ ಅಹಂಕಾರ ಅಡಗಿದಂತೆಲ್ಲಾ ಮನಸ್ಸಿನ ಸ್ಥೈರ್ಯ ಹೆಚ್ಚುವುದು. ನೆಮ್ಮದಿಯೂ ದೊರಕುವುದು. ದೇಹ, ಮನಸ್ಸು, ಬುದ್ಧಿ ನಮ್ಮ ಹಿಡಿತಕ್ಕೊಳಪಡುವುವು.

ನಮ್ಮ ಜೀವನಕ್ಕೆ ಅಪರಿಚಿತವಾದವರು ಯಾರೂ ಇಲ್ಲ. ನಮ್ಮ ನಿತ್ಯ ಜೀವನದಲ್ಲಿ ಅಳು-ನಗು, ಕಷ್ಟ-ಸುಖ, ಆಶೆ-ನಿರಾಶೆ, ಇಷ್ಟ-ಅನಿಷ್ಟ, ಸೋಲು-ಗೆಲುವು, ಮಾನ-ಅಪಮಾನ, ಲಾಭ-ನಷ್ಟ ಇವು ಎಲ್ಲರ ಅನುಭವಕ್ಕೂ ಬಂದಿರುವಂತಹುದೆ. ಆದರೆ ಇವು ಎಲ್ಲರಿಗೂ ಒಂದೇ ಸಮನಾಗಿಲ್ಲದಿದ್ದರೂ ಜೀವನ ಮಾತ್ರ ಎಲ್ಲರಿಗೂ ಸಾಮಾನ್ಯ. ಜೀವನವು ಸರ್ವರಿಗೂ ನಿಕಟವಾದ ಅನುಭವವಾಗಿರುವುದು ನಿಜ. ಆದರೂ ನಮ್ಮಲ್ಲಿ ಎಷ್ಟು ಮಂದಿ ಜೀವನದ ಅರ್ಥವನ್ನು ಸ್ಪಷ್ಟವಾಗಿ ತಿಳಿದಿದ್ದೇವೆ? ಜೀವನವೇನೆಂದು ತಿಳಿಯದೆ ನಾವು ಲೋಕದಲ್ಲಿ ಜೀವನ ನಡೆಸುತ್ತಿದ್ದೇವೆ ಎನಿಸುತ್ತದೆ. "ಅನುಭವದ ಅಂಶಗಳಿಂದಲೇ ಜೀವನವು ರೂಪಿಸಲ್ಪಡುತ್ತದೆ. ಅನುಭವವನ್ನು ವಿಶ್ಲೇಷಿದರೆ ಅದರಲ್ಲಿ ಮೂರು ಅಂಶಗಳು ಕಂಡುಬರುತ್ತವೆ. ಅನುಭವವನ್ನು ಪಡೆಯುವ ಅನುಭವಿ; ಅನುಭವಕ್ಕೆ ಒಳಪಡುವ ವಿಷಯ; ಇವೆರಡರ ಸಂಬಂಧವಾದ 'ತಿಳಿವು'; ಈ ತಿಳಿವೇ ಅನುಭವ. ಅನುಭವವುಂಟಾಗುವುದು ಜಡವಾದ ದೇಹಕ್ಕಲ್ಲ, ಮನಸ್ಸಿಗೆ. ಆತ್ಮನಿಂದ ಚೈತನ್ಯ ಪಡೆದುಕೊಂಡಿರುವ ಮನಸ್ಸೇ 'ಅನುಭವಿ'.

"ಚಿಂತನ ಚೇತನ ಚೆಲುವಿನ ಹೂವರಳಿಸೆ
ಮನಸಿಗೆ ಅನುಭವ ನೀಡುವ ಆತ್ಮದ ಭಾಷೆ"

– ಡಾ. ಎಂ.ಜಿ. ನಾಗರಾಜ್

* ಅರಮೇರಿ ಕಳಂಚೇರಿ ಮಠ, ವೀರಾಜಪೇಟೆ, ಕೊಡಗು





ಕಾವ್ಯ ನಮನ

# ಶ್ರೀ ಸಿದ್ಧಗಂಗೆಯ ಸಿದ್ಧಯೋಗಿ

ಪೂಜ್ಯ ಗುರುಸೇವಾ ತಪಸ್ಸಿನೊಳ್, ಆಧ್ಯಾತ್ಮ ವಿದ್ಯೆಯೊಳ್
ಸತ್ಕಾರ್ಯ ತತ್ಪರತೆಯೊಳ್, ವೀರ ವಿರತಿಯೊಳ್
ಸುಪ್ತ ತಪದೊಳ್, ಶಾಂತಿಯೊಳ್, ಧೀಶಕ್ತಿಯೊಳ್
ಸಾಮಾಜಿಕ ಪ್ರಗತಿಯೋಜನೆಯ ಮಾರ್ಗದೊಳ್
ಲಿಂಗಕಳೆ, ಲಿಂಗಗುಣ, ಲಿಂಗಯೋಗವನರಿವ ಚರಕುಲಾದರ್ಶನೆ
ನೀಡೆಮಗೆ ನಿನ್ನಂಥ ಗುರುಭಕ್ತಿ, ಧೀಶಕ್ತಿ.

ಶ್ರೀ ಸಿದ್ಧಗಂಗೆಯ ಶೋಭೆಯ, ದಿನಕರನೆ
ದೀಪಧೂಪಗಳಿಂ, ಘಂಟಾನಾದದಿಂ
ಶ್ರೀ ರುದ್ರಘೋಷದಿಂ ಲಿಂಗಪೂಜಾಲೋಲನೆ
ಭಸಿತ, ರುದ್ರಾಕ್ಷ, ತಿಳಿಗಾವಿಗೆ ಶೋಭೆಯನಿತ್ತ ನಿರಂಜನನೆ
ಆಧ್ಯಾತ್ಮ ಮೇರುಗಿರಿಯೆ, ಪರಮಪವಿತ್ರ ವರದಾಸೋಹಿಯೆ

ಲಿಂಗಪೂಜಾನಿಷ್ಠೆ, ಸಚ್ಚರಿತಾಚಾರ, ಸಾತ್ವಿಕ ಪ್ರಸಾದ,
ಸಂಯಮ, ಶಿಸ್ತು, ಮಿತಭಾಷೆ, ಸರಳತೆ,
ಸತತ ಕ್ರಿಯಾಶೀಲ ವ್ಯಕ್ತಿತ್ವ, ಭಕ್ತಹಿತಚಿಂತಕ,
ದಾಸೋಹಂಭಾವನೆ, ಸಮಯದ ಪರಿಪಾಲನೆ
ಇವುಗಳೆ ಅವರ ಆಯುರಾರೋಗ್ಯದ ಗೌಪ್ಯವು.

ಶ್ರೀಮಠ ನಿರ್ಮಿತದ ಒಂದೊಂದು ಕಲ್ಲುಕಂಬಗಳೂ
ಒಂದೊಂದು ಮರಳಕಣವೂ, ಅವರ ಪರಿಶ್ರಮವನು ತೋರುತಿವೆ
ಶಿಕ್ಷಣಕೇಂದ್ರಗಳ ಅಧಿಕಗೊಳಿಸುತ, ವಿದ್ಯೆಯನು ಪಸರಿಸುತ
ಅಮೂಲ್ಯ ಸಮಯವನು ವ್ಯರ್ಥ ವ್ಯಯಿಸದ ಶ್ರಮಜೀವಿ.

ಅಂದು ಬಸವಣ್ಣನ ಅನುಭವಮಂಟಪ ದಾಸೋಹ
ಮನೆಯಿಂದು ಶ್ರೀ ಸಿದ್ಧಗಂಗೆಯಲಿ ಅವಿರತವಾಗಿ
ಮುಂದುವರೆದಿದೆ. ವಿದ್ಯಾರ್ಥಿಗಳು, ಯಾತ್ರಾರ್ಥಿಗಳು,
ಶರಣಗಣಸ್ತೋಮವೆಲ್ಲವನೂ ಪ್ರಸಾದ ದಾಸೋಹದಿಂದ
ತನುಮನ ತಣಿಸಿರುವ ಶಿವಯೋಗಿಗೆ ನಮನವು.

ಜ್ಞಾನಗಂಗೆಯಾಗಿ, ನಿತ್ಯದಾಸೋಹಿಯಾಗಿ
ಗುಪ್ತಗಾಮಿನಿಯಂತೆ ಪ್ರವಹಿಸುತ್ತಿದೆ.
ಅಗಣಿತ ಭಕ್ತಗಣಕೆ ನಿತ್ಯನಿರಂತರ
ಸಂತೃಪ್ತಿಪಡಿಸುವ ಆ ತೊರೆಯು
ಅದುವೆ ಧರೆಯಮೇಲಿನ 'ವಿಸ್ಮಯ'ವು.

'ಶತವರುಷ' ಮೇಲ್ 'ದಶವರುಷ' ಹರುಷದಿಂ
ತುಂಬಿದಾಯುಷ್ಯದಿಂ, ಲೀಲೆಯಿಂ ಮುನ್ನಡೆಯುತಿರು
ಮುನ್ನಡೆಸುತಿರು ನಮ್ಮನನವರತ
ಯತಿಗಳಿಗಾದರ್ಶವಾಗಿ, ಸತ್ಪಥಕೆ ಪ್ರಭೆಯಾಗಿ
ಸಾಧಕರಿಗೆ ಸ್ಫೂರ್ತಿಯಾಗಿ, ಜಂಗಮಗಣದಲಿ
'ಮೇರುಗಿರಿ'ಯಾಗಿ ರಾರಾಜಿಸುತಿರ್ಪ ನಿರಂಜನನೆ
ವಿಶ್ವವಿಜಯಿ, ಸುಪ್ರಭಾಮುಂಜನೆ
ಬಾಗಿ ನಮಿಪೆನಾಂ ನಿಮ್ಮ ಸಿರಿಯಡಿಗೆ.

– ವಿಜಯಾ ಪರಂಜ್ಯೋತಿ

## ಅಜರಾಮರ

ಅಜರಾಮರ ಅಜರಾಮರ
ನಿಮ್ಮ ಸೇವೆ ಜಗದಲಿಂದು ಅಜರಾಮರ
ನಿಮ್ಮ ಕೀರ್ತಿ ಭುವಿಯಲಿಂದ ಅಜರಾಮರ
ನಿಮ್ಮ ದರುಶನ ಭಕ್ತರಿಗಿಂದು ಅಜರಾಮರ

ನೀವು ತುಳಿದ ಹೆಜ್ಜೆಗಳಿಂದು ದಾರಿದೀಪ
ನಿಮ್ಮ ಕಾಯದ ದುಡಿಮೆಯಿಂದ ಪರಮಪಾವನ
ನೀವು ನೀಡಿದ ಅನ್ನವಿಂದು ಸಂಜೀವಿನಿ
ನಿಮ್ಮ ವಿದ್ಯಾ ದಾನವಿಂದು ದಿವ್ಯಚೇತನ

ನಿಮ್ಮ ಪೂಜೆ ಫಲವುಯಿಂದು ಮುಕ್ತಿಸಾಧನ
ನಿಮ್ಮ ತಪದ ಫಲವುಯಿಂದು ಪುಣ್ಯಭಾವನ
ನಿಮ್ಮ ಪ್ರೀತಿ ಮಕ್ಕಳಲ್ಲಿ ಚಿರನೂತನ
ನಿಮ್ಮ ದೃಷ್ಟಿ ಭಕ್ತರಲ್ಲಿ ನಿತ್ಯನೂತನ.

– ಬಿ.ಆರ್. ರಾಜಶೇಖರ್







## ಕ್ಷೇತ್ರ ವಾರ್ತೆ

ಮೇ ೨೨ ರಂದು ಶ್ರೀಕ್ಷೇತ್ರದಲ್ಲಿ ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆ (ರಿ) ವತಿಯಿಂದ ನಡೆಯುತ್ತಿರುವ ಪ್ರಾಥಮಿಕ, ಸಂಸ್ಕೃತ ಶಾಲೆ, ಪ್ರೌಢಶಾಲೆಗಳ ಮುಖ್ಯೋಪಧ್ಯಾಯರ ಸಭೆ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮೀಗಳವರ ಸಾನ್ನಿಧ್ಯದಲ್ಲಿ ನಡೆಯಿತು. ಈ ಸಭೆಯಲ್ಲಿ ವಿದ್ಯಾ ಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀ ಟಿ.ಕೆ. ನಂಜುಂಡಪ್ಪನವರು, ಆಡಳಿತಾಧಿಕಾರಿಗಳಾದ ಶ್ರೀ ವಿಶ್ವನಾಥಯ್ಯ, ವಿದ್ಯಾಧಿಕಾರಿಗಳಾದ ಶ್ರೀ ಸಿ.ಎಸ್. ಸಿದ್ಧಲಿಂಗಯ್ಯ, ವಿಶೇಷಾಧಿಕಾರಿಗಳಾದ ಶ್ರೀ ಬಸವರಾಜು, ನೂಡಲ್ ಅಧಿಕಾರಿಗಳಾದ ಶ್ರೀ ಈಶ್ವರಯ್ಯನವರು ಉಪಸ್ಥಿತರಿದ್ದರು.

ಪ್ರಾಸ್ತಾವಿಕ ಭಾಷಣ ಮಾಡಿದ ಶ್ರೀ ಟಿ.ಕೆ. ನಂಜುಂಡಪ್ಪನವರು ಸಂಸ್ಥೆಯ ಶಾಲೆಗಳ ಮುಖ್ಯಸ್ಥರು ಒಳ್ಳೆಯ ನಡವಳಿಕೆಯಿಂದ ಸಕ್ರಿಯವಾಗಿ, ಪಾರದರ್ಶಕವಾಗಿ ಕಾರ್ಯನಿರ್ವಹಿಸಬೇಕು, ಪರಸ್ಪರ ದ್ವೇಷ, ಅಸೂಯೆ ಬಿಟ್ಟು, ಪರಮಪೂಜ್ಯರ ಆಶಯಕ್ಕೆ ತಕ್ಕಂತೆ ಕರ್ತವ್ಯ ನಿರ್ವಹಿಸಬೇಕೆಂದರು.

ವಿದ್ಯಾಧಿಕಾರಿಗಳಾದ ಶ್ರೀ ಸಿ.ಎಸ್. ಸಿದ್ಧಲಿಂಗಯ್ಯನವರು ಶಾಲಾ ಪ್ರಾರಂಭ, ಪೂರ್ವಭಾವಿ ಕಾರ್ಯಗಳು, ಶಾಲಾ ಕ್ಯಾಲೆಂಡರ್, ದಾಖಲಾತಿ, ಫಲಿತಾಂಶದ ಬಗ್ಗೆ ಮಾತನಾಡಿ ಸ್ಫೂರ್ತಿದಾಯಕವಾಗಿ ಕರ್ತವ್ಯ ನಿರ್ವಹಿಸಬೇಕೆಂದು ತಿಳಿಸಿದರು.

ಶ್ರೀ ಬಸವರಾಜು ಮತ್ತು ಶ್ರೀ ಈಶ್ವರಯ್ಯನವರು ಶಿಸ್ತುಪಾಲನೆ, ಫಲಿತಾಂಶ ಉತ್ತಮಪಡಿಸುವ ಬಗ್ಗೆ, ಶೈಕ್ಷಣಿಕ ಅಭಿವೃದ್ಧಿ, ಗುರಿ, ಕಾರ್ಯಬದ್ಧತೆ ಬಗ್ಗೆ ವಿವರವಾಗಿ ಮಾರ್ಗದರ್ಶನ ಮಾಡಿದರು. ಆಡಳಿತಾಧಿಕಾರಿಗಳಾದ ಶ್ರೀ ವಿಶ್ವನಾಥಯ್ಯನವರು ಶಾಲೆಯ ಜಮೀನು ಖಾತೆ, ಕಂದಾಯ, ಫಹಣಿ, ಶಾಲಾ ಸಂಪತ್ತನ್ನು ರಕ್ಷಿಸುವ ಜವಾಬ್ದಾರಿಯನ್ನು ತಿಳಿಸಿದರು.

ಸಭೆಯ ದಿವ್ಯಸಾನ್ನಿಧ್ಯವನ್ನು ವಹಿಸಿದ್ದ ಪರಮಪೂಜ್ಯರು ತಮ್ಮ ಆಶೀರ್ವಚನದಲ್ಲಿ ಪೂಜ್ಯ ಗುರುಗಳ ಸ್ಮರಣೆ ಮಾಡಿ, ಸಂಸ್ಥೆಯಲ್ಲಿ ತಾವು ಕಾರ್ಯನಿರ್ವಹಿಸುತ್ತಿರುವ ಬಗ್ಗೆ ಹೆಮ್ಮೆ ಪಡಬೇಕು. ಪೂಜ್ಯರ ಆಶಯ ಗ್ರಾಮಾಂತರ ಪ್ರದೇಶದಲ್ಲಿ ವಿದ್ಯಾಭ್ಯಾಸ ನೀಡುವುದಾಗಿವೆ. ಸಮಾಜದಲ್ಲಿ ಇಬ್ಬರು ವ್ಯಕ್ತಿಗಳ ಕಾರ್ಯ ಪವಿತ್ರವಾದದ್ದು, ಅದು ಶಿಕ್ಷಕ ಮತ್ತು ವೈದ್ಯವೃತ್ತಿ. ವೈದ್ಯ ತಪ್ಪು ಮಾಡಿದರೆ ರೋಗಿ ಸಾಯುತ್ತಾನೆ. ಇಂಜಿನಿಯರ್ ತಪ್ಪು ಮಾಡಿದರೆ ಒಂದು ಕಟ್ಟಡಕ್ಕೆ ಹಾನಿಯಾಗಬಹುದು, ಆದರೆ ಶಿಕ್ಷಕ ತಪ್ಪು ಮಾಡಿದರೆ ಒಂದು ಸಮಾಜ ಹಾಳಾದಂತೆ, ತಮ್ಮ ವೃತ್ತಿಯ ಬಗ್ಗೆ ಶಿಕ್ಷಕ ಹೆಮ್ಮೆಪಡಬೇಕು. ಮುಖ್ಯ ಶಿಕ್ಷಕರು ಶಾಲೆಯ ಆಧಾರಸ್ಥಂಭ. ಶಾಲೆಯ ಸರ್ವತೋಮುಖ ಅಭಿವೃದ್ಧಿ ಜವಾಬ್ದಾರಿ ನಿಮ್ಮದಾಗಿದೆ ಎಂದು ತಿಳಿಸಿದರು.

ಕನ್ನಡ ನಾಡಿನಲ್ಲಿ ಕನ್ನಡಕ್ಕೆ ಅಗ್ರಸ್ಥಾನ. ಆದರೆ ಬದಲಾದ ಪರಿಸ್ಥಿತಿಯಲ್ಲಿ ಮಕ್ಕಳು, ಪೋಷಕರು ಆಂಗ್ಲ ಮಾಧ್ಯಮದ ಕಡೆ ವಾಲುತ್ತಿದ್ದಾರೆ. ನೀವು ಉತ್ತಮ ಬೋಧನೆ, ಮಕ್ಕಳಲ್ಲಿ ಪ್ರೀತಿ ತೋರಿಸಿ ಮಕ್ಕಳನ್ನು ಆಕರ್ಷಿಸಬೇಕು. ಉತ್ತಮ ಬೋಧನೆ ಮಾಡಿ ಹೆಚ್ಚು ಫಲಿತಾಂಶ ಬರುವಂತೆ ಮಾಡಬೇಕು, ೧೦೦ಕ್ಕೆ ನೂರು ಫಲಿತಾಂಶ ಬರಲು ಶ್ರಮಿಸಬೇಕು. ಉತ್ತಮ ಬೋಧನೆ ಮಾಡಿ ಸಂಸ್ಥೆಯ ಘನತೆ, ಗೌರವ ಕಾಪಾಡಿ. ನಿಮ್ಮ ಹೆಗಲ ಮೇಲೆ ಗುರುತರ ಜವಾಬ್ದಾರಿ ಇದೆ. ವಾಮಮಾರ್ಗ ಬೇಡ, ಪಾರದರ್ಶಕವಾಗಿರಬೇಕು. ಪೋಷಕರ ಬಗ್ಗೆ ಉತ್ತಮ ಬಾಂಧವ್ಯ ಹೊಂದಿರಬೇಕು. ಹಣಕಾಸಿನ ವಿಷಯದಲ್ಲಿ ಗಾಂಧೀಜಿಯವರ ಕನಸು ಹಳ್ಳಿಗಳ ಉದ್ಧಾರವೇ ದೇಶದ ಉದ್ಧಾರ ಎಂಬುದಾಗಿತ್ತು. ಪೂಜ್ಯರ ಆಶಯ ಸಹ ಅದೇ ಆಗಿದೆ.

ಮನುಷ್ಯ ಇರುವವರೆಗೆ ಸಮಸ್ಯೆ ಇದ್ದೆ ಇರುತ್ತದೆ. ಪ್ರತಿ ಸಮಸ್ಯೆಗೆ ಪರಿಹಾರ ಇದೆ. ಫಲಿತಾಂಶ ಕಡಿಮೆ ಇರುವವರು ಧೃತಿಗೆಡದೆ ಆತ್ಮವಿಶ್ವಾಸದಿಂದ, ಬದ್ಧತೆಯಿಂದ ಪಾಠ ಮಾಡಿ ನಿಮ್ಮ ಬುದ್ಧಿಯನ್ನು ಧಾರೆ ಎರೆಯಿರಿ. ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆ ಕುಟುಂಬ ಇದ್ದಹಾಗೆ, ನಾವೆಲ್ಲ ಒಂದೇ ಎಂಬ ಭಾನೆಯಿಂದ ಅಧಿಕಾರಿಗಳು ನೀಡಿರುವ ಮಾರ್ಗದರ್ಶನ ಪಡೆದು ಉತ್ತಮ ಕೆಲಸ ಮಾಡಿ ಸಂಸ್ಥೆಯನ್ನು ಉನ್ನತ ಸ್ಥಾನಕ್ಕೆ ಕೊಂಡೊಯ್ಯಬೇಕೆಂದರು. ಶ್ರೀ ಬಿ. ರೇವಣಸಿದ್ಧಯ್ಯ, ಮು.ಶಿ., ಪ್ರಾರ್ಥನೆ ಮಾಡಿದರು, ಶ್ರೀ ಬಸವರಾಜಯ್ಯ, ಮು.ಶಿ., ಶರಣು ಸಮರ್ಪಿಸಿದರು.

**ವರದಿ : ಬಿ.ಆರ್. ರಾಜಶೇಖರ್**
ಮುಖ್ಯ ಶಿಕ್ಷಕರು, ಶ್ರೀ ಸಿದ್ಧಗಂಗಾ ಪ್ರೌಢಶಾಲೆ
ಶಿವನಹಳ್ಳಿ, ಬೆಂಗಳೂರು







## ಜಿಲ್ಲಾ ವಾರ್ತೆ – ಕಲಬುರ್ಗಿ

# ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ವಿಶ್ವರತ್ನ

ಬಸವಣ್ಣ ವಿಶ್ವ ಗುರುವಾದರೆ, ಸಿದ್ದಗಂಗಾ ಮಠದ ಹಿರಿಯ ಪೂಜ್ಯರಾದ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ವಿಶ್ವರತ್ನವಾಗಿದ್ದಾರೆ ಎಂದು ತುಮಕೂರಿನ ಸಿದ್ದಗಂಗಾ ಮಠದ ಸಿದ್ದಗಂಗಾ ಮಾಸಪತ್ರಿಕೆ ಸಂಪಾದಕ ಪ್ರೊ. ಹೆಚ್.ವಿ.ವೀರಭದ್ರಯ್ಯ ಅಭಿಮತ ವ್ಯಕ್ತಪಡಿಸಿದರು.

ನಗರದ ಪತ್ರಿಕಾ ಭವನದಲ್ಲಿ ಸಿದ್ಧಗಂಗಾ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘ ಆಯೋಜಿಸಿದ್ದ ಬಸವಣ್ಣ ಮತ್ತು ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ವಿಶೇಷ ಉಪನ್ಯಾಸ ಕಾರ್ಯಕ್ರಮದಲ್ಲಿ ಮಾತನಾಡಿದರು. ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಗೆ ಭಾರತ ರತ್ನ ಪ್ರಶಸ್ತಿ ಕೊಡಬೇಕು ಎಂದು ಎಲ್ಲರ ಅಭಿಮತವಾಗಿದೆ. ಆದರೆ ಶ್ರೀಗಳು ವಿಶ್ವರತ್ನವಾಗಿದ್ದಾರೆ ಎಂದು ಹೇಳಿದರು.



ಕಲಬುರಗಿ ಪತ್ರಿಕಾ ಭವನದಲ್ಲಿ ಆಯೋಜಿಸಿದ್ದ ಬಸವಣ್ಣ ಮತ್ತು ಡಾ.ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ವಿಶೇಷ ಉಪನ್ಯಾಸವನ್ನು ಶ್ರೀಶೈಲ ಸಾರಂಗ ಮಠದ ಜಗದ್ಗುರು ಶ್ರೀ ಶ್ರೀ ಸಾರಾಂಗಧರ ದೇಶಿಕೇಂದ್ರ ಸ್ವಾಮೀಜಿ ಉದ್ಘಾಟಿಸಿದರು. ಪ್ರೊ. ಹೆಚ್.ವಿ.ವೀರಭದ್ರಯ್ಯ, ಶ್ರೀ ವಾದಿರಾಜ ವ್ಯಾಸಮುದ್ರ, ಶ್ರೀ ಅರುಣಕುಮಾರ ಪಾಟೀಲ್, ಶ್ರೀ ಭವಾನಿಸಿಂಗ್ ಠಾಕೂರ ಇದ್ದರು.

ಶ್ರೀಗಳು ಬಹಳ ಶ್ರಮದಿಂದ ಮಠವನ್ನು ಬೆಳೆಸಿದ್ದಾರೆ. ಶ್ರೀಗಳ ಶ್ರಮದ ಫಲವಾಗಿ ಇಂದು ಸಿದ್ಧಗಂಗಾ ಮಠ ಉತ್ತುಂಗಕ್ಕೇರಿದೆ. ಮನೆಯಲ್ಲೂ ಸಿಗದಂಥ ಗುಣಮಟ್ಟದ ಪ್ರಸಾದ ವ್ಯವಸ್ಥೆ ಅಲ್ಲಿದೆ. ಜ್ಞಾನ ದಾಸೋಹದ ಜತೆ ಅನ್ನ ದಾಸೋಹ ಗೈಯುವ ಮೂಲಕ ಲಕ್ಷಾಂತರ ವಿದ್ಯಾರ್ಥಿಗಳ ಬಾಳಿಗೆ ದಿವ್ಯ ಜ್ಯೋತಿಯಾಗಿದ್ದಾರೆ ಎಂದರು.

ಬಸವಣ್ಣನವರು ಕೇವಲ ತಮಗಾಗಿ ಬದುಕಲಿಲ್ಲ ಜಗತ್ತಿಗಾಗಿ ಬದುಕಿದರು. ಹಾಗೆಯೇ ಶತಮಾನ ಕಂಡ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ಕೂಡ ಸಮಾಜಕ್ಕಾಗಿ ತಮ್ಮನ್ನು ಸಮರ್ಪಿಸಿಕೊಂಡಿದ್ದಾರೆ. ಮಕ್ಕಳಲ್ಲೇ ದೇವರನ್ನು ಕಾಣುತ್ತಿದ್ದಾರೆ ಎಂದರು. ಹಳೆ ವಿದ್ಯಾರ್ಥಿಗಳ ಸಂಘದಲ್ಲಿ ೧೬೦೦೦ ಜನ ಸದಸ್ಯರಿದ್ದಾರೆ. ಇಷ್ಟೊಂದು ಶಿಷ್ಯರ ಪ್ರೀತಿ ಗಳಿಸಿದ ಶ್ರೀಗಳು ನಡೆದಾಡುವ ದೇವರು ಎಂದರೆ ತಪ್ಪಾಗಲಾರದು ಎಂದರು.

ಶ್ರೀಶೈಲ ಸಾರಂಗಧರ ಮಠದ ಜಗದ್ಗುರು ಶ್ರೀ ಸಾರಾಂಗಧರ ದೇಶಿಕೇಂದ್ರ ಮಹಾಸ್ವಾಮೀಜಿ ಸಾನ್ನಿಧ್ಯ ವಹಿಸಿ ಆಶೀರ್ವಚನ ನೀಡಿದರು. ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ವಿಜಯವಾಣಿ ದಿನ ಪತ್ರಿಕೆಯ ಸ್ಥಾನಿಕ ಸಂಪಾದಕ ಶ್ರೀ ವಾದಿರಾಜ ವ್ಯಾಸಮುದ್ರ, ಅಧ್ಯಕ್ಷತೆ ವಹಿಸಿದ್ದರು. ಸಂಘದ ಅಧ್ಯಕ್ಷ ಶ್ರೀ ಅರುಣಕುಮಾರ ಪಾಟೀಲ್, ಶ್ರೀ ಕೊಡಲ್‌ಹಂಗರಗಾ ಮಾತನಾಡಿದರು. ಕಾರ್ಯಕ್ರಮದಲ್ಲಿ ಜಿಲ್ಲಾ ಕಾರ್ಯನಿರತ ಪತ್ರಕರ್ತರ ಸಂಘದ ಅಧ್ಯಕ್ಷ ಶ್ರೀ ಭವಾನಿಸಿಂಗ್ ಠಾಕೂರ, ಶ್ರೀ ಅಶೋಕ ರಟಕಲ್, ಶ್ರೀ ಸಿದ್ರಾಮ ಪಾಟೀಲ್, ಶ್ರೀ ರುದ್ರಮುನಿ ಪುರಾಣಿಕ, ಶ್ರೀ ಸಿದ್ದು ರಾಜೋಳ, ಶ್ರೀ ಜಗದೇವಪ್ಪ ಹಲಕರ್ಟಿ, ಶ್ರೀ ಮಲ್ಲಿಕಾರ್ಜುನ ಅಲ್ಲೂರಕರ್ ಮೊದಲಾದವರು ಉಪಸ್ಥಿತರಿದ್ದರು. ಪತ್ರಕರ್ತರಾದ ಶ್ರೀ ಚನ್ನಬಸಯ್ಯ ಗುರುವಿನ್ ವಂದಿಸಿದರು, ಶ್ರೀ ದೇವಿಂದ್ರಪ್ಪ ಆವಂಟಿ ನಿರೂಪಿಸಿದರು.

**ವರದಿ : ಶ್ರೀ ದೇವಿಂದ್ರಪ್ಪ ಆವಂಟಿ**







## ದಾನಿಗಳ ಪಟ್ಟಿ

ಶ್ರೀ ಸಿದ್ಧಗಂಗಾ ಮಠ, ತುಮಕೂರು

ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳ ಪಟ್ಟಿ

ತಾವು ನೀಡುವ ಹಣಕ್ಕೆ ಆದಾಯ ತೆರಿಗೆ ಇಲಾಖೆಯಿಂದ ೮೦ಜಿ ಅಡಿಯಲ್ಲಿ ಶೇ. ೫೦ರವರೆಗೆ ತೆರಿಗೆ ವಿನಾಯಿತಿ ಇರುತ್ತದೆ.

| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೨೧೯೩. | ಶ್ರೀ ತಿಮ್ಮೇಗೌಡ<br>ಗೋವಿನಪುರ | ೨೦೦೧ |
| ೨೧೯೪. | ಶ್ರೀ ಎನ್.ಬಿ. ಶಿವಶಂಕರಾಚಾರ್<br>ಬೆಂಗಳೂರು | ೨೦೦೦ |
| ೨೧೯೫. | ಶ್ರೀ ಗಂಗನಸರಸಯ್ಯ<br>ಸೊಂಡೇಕೊಪ್ಪ | ೧೦೦೧ |
| ೨೧೯೬. | ಶ್ರೀ ಎಸ್. ಚಂದ್ರಯ್ಯ<br>ಸಿರಗನಹಳ್ಳಿ | ೧೦೦೦ |
| ೨೧೯೭. | ಶ್ರೀ ಎ.ಎಂ. ಯೋಗಮೂರ್ತಿ<br>ಆಧಿಗೆರೆ | ೧೦೦೦ |
| ೨೧೯೮. | ಶ್ರೀ ಜಿ.ಪಿ. ರಾಜಣ್ಣ<br>ಬೆಂಗಳೂರು | ೧೦೦೧ |
| ೨೧೯೯. | ಶ್ರೀ ಸಿ. ರೇವಣಸಿದ್ಧಯ್ಯ<br>ಶ್ರೀ ಸಿದ್ಧಗಂಗಾಮಠ | ೨೦೦೦ |
| ೨೨೦೦. | ಶ್ರೀ ನೀಲಕಂಠಯ್ಯ<br>ಬೆಂಗಳೂರು | ೧೦೦೦ |
| ೨೨೦೧. | ಶ್ರೀ ಜೆ.ಎಲ್. ಮಂಜುನಾಥ<br>ಬೆಂಗಳೂರು | ೨೦೦೦ |
| ೨೨೦೨. | ಶ್ರೀ ಗೋವಿಂದಯ್ಯ<br>ಬೆಂಗಳೂರು | ೧೦೦೦ |
| ೨೨೦೩. | ಶ್ರೀ ಕೆ.ವೀರೇಶ<br>ಬಳ್ಳಾರಿ | ೨೦೦೦ |
| ೨೨೦೪. | ಶ್ರೀ ಆರ್. ಗೋವಿಂದಪ್ಪ<br>ತುಮಕೂರು | ೨೦೦೧ |
| ೨೨೦೫. | ಶ್ರೀ ಎನ್. ನರಸಯ್ಯ<br>ತುಮಕೂರು | ೧೦೦೦ |
| ೨೨೦೬. | ಶ್ರೀ ಕೆ.ವಿ. ವೀರಣ್ಣ<br>ಬೆಂಗಳೂರು | ೧೦,೦೦೦ |
| ೨೨೦೭. | ಶ್ರೀ ವಿ. ಭದ್ರಯ್ಯ<br>ಬೆಂಗಳೂರು | ೨೨,೧೫೧ |
| ೨೨೦೮. | ಶ್ರೀ ಗಂಗಾಧರಸ್ವಾಮಿ<br>ಬೆಂಗಳೂರು | ೧೦೦೦ |
| ೨೨೦೯. | ಶ್ರೀ ಡಿ.ಸಿ. ಶಿವಕುಮಾರಸ್ವಾಮಿ<br>ಬೆಂಗಳೂರು | ೫೦೦೦ |
| ೨೨೧೦. | ಡಾ. ಆರ್.ಎನ್. ನಂಜುಂಡಯ್ಯ<br>ಬೆಂಗಳೂರು | ೧೧,೬೩೫ |

| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೨೨೧೧. | ಶ್ರೀ ಗಂಗಾಧರಯ್ಯ ಡಿ.<br>ಬೆಂಗಳೂರು | ೨೫,೦೦೧ |
| ೨೨೧೨. | ಶ್ರೀ ತಿಮ್ಮಣ್ಣಪ್ಪ<br>ಬೆಂಗಳೂರು | ೨೦೦೦ |
| ೨೨೧೩. | ಶ್ರೀ ಎಸ್.ಆರ್. ರೇಣುಕಾರಾಧ್ಯ<br>ಬೆಂಗಳೂರು | ೧೦೦೦ |
| ೨೨೧೪. | ಶ್ರೀ ಕೆ.ಪಿ. ಗಂಗಾಧರಯ್ಯ<br>ಕನಕಪುರ | ೩೬,೫೦೦ |
| ೨೨೧೫. | ಶ್ರೀ ಕೆ.ಹೆಚ್. ಜಯರಾಮಪ್ಪ<br>ತುಮಕೂರು | ೧೦,೫೩೦ |
| ೨೨೧೬. | ಶ್ರೀ ಸಿ.ಎಸ್. ಪ್ರಭಾಕರ<br>ಬೆಂಗಳೂರು | ೧೦,೦೦೧ |
| ೨೨೧೭. | ಶ್ರೀ ಎನ್. ನಾರಾಯಣಸ್ವಾಮಿ<br>ಬೆಂಗಳೂರು | ೫೦೦೦ |
| ೨೨೧೮. | ಶ್ರೀ ಜಿ.ಬಿ. ಮೃತ್ಯುಂಜಯ<br>ಘಟ್ಟಿಪುರ | ೫೦೦೧ |
| ೨೨೧೯. | ಶ್ರೀ ವಿ.ಎನ್. ಶಿವಣ್ಣ<br>ಬೆಂಗಳೂರು | ೨೦೦೧ |
| ೨೨೨೦. | ಶ್ರೀ ವೆಂಕಟೇಶ್<br>ಬೆಂಗಳೂರು | ೧೦,೦೦೦ |
| ೨೨೨೧. | ಶ್ರೀ ಎಸ್. ಕುಮಾರ್<br>ತುಮಕೂರು | ೨೦೦೧ |
| ೨೨೨೨. | ಶ್ರೀ ಚನ್ನವೀರದೇವರು<br>ಬೆಂಗಳೂರು | ೨೫,೦೦೦ |
| ೨೨೨೩. | ಶ್ರೀ ಎಂ.ಎಸ್. ಸೋಮಶೇಖರಯ್ಯ<br>ಬೆಂಗಳೂರು | ೨೫,೦೦೦ |
| ೨೨೨೪. | ಶ್ರೀ ಬಿ.ಎಸ್. ಗುರುಸ್ವಾಮಿ<br>ಬೆಂಗಳೂರು | ೨೦೦೦ |
| ೨೨೨೫. | ಶ್ರೀ ಹಿತೇಶ್<br>ಬೆಂಗಳೂರು | ೧೦೦೦ |
| ೨೨೨೬. | ಶ್ರೀ ಸಿ. ದೇವರಾಜು<br>ಲಕ್ಕನಹಳ್ಳಿ | ೧೬,೦೦೦ |
| ೨೨೨೭. | ಶ್ರೀ ಪ್ರೊ. ಡಿ.ಚಂದ್ರಪ್ಪ<br>ತುಮಕೂರು | ೧೦೦೦ |
| ೨೨೨೮. | ಶ್ರೀ ಕೆ.ಆರ್. ಪರಶಿವಮೂರ್ತಿ<br>ಹೊಸಕೋಟೆ | ೨೦೦೧ |

(ಮುಂದುವರೆಯುತ್ತದೆ)

RNI No. 17139/69

"Siddaganga" Monthly - Postal Reg. No. L2/RNP/385/TMR/2018-20
Posted at RMS, Tumkur-572 102



To

______________________

______________________

______________________

If undelivered please return to :
Editor
Siddaganga Monthly Magazine
Siddaganga Math
Tumkur-572 104

Cover printed at : Geetanjali Graphics, B-71, KSSIDC Indl. Area, 8th Block, Rajajinagar, Bengaluru-10. Ph : 23404233
email ID : geetanjaligraphics@gmail.com